ಜನಪ್ರಿಯ ಗ್ರಂಥಮಾಲೆ

೩೪೪

# ಪ್ಲೆಟೋನ ಆದರ್ಶ ರಾಜ್ಯ

ಟಿ. ಮಲ್ಲಪ್ಪ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮಾರ್ಚ್, ೧೯೬೩

ಉಪನ್ಯಾಸ ಗ್ರಂಥಮಾಲೆ

೩೪೪

# ಪ್ಲೇಟೋನ ಆದರ್ಶ ರಾಜ್ಯ

ಪ್ರೊ. ಟಿ. ಮಲ್ಲಪ್ಪ






...ಯಕ್ಕೆ ಬರೆದು
...ಗಿಯೂ ಸಂತೋಷದ

ಭಾಗವಹಿಸುವದರಿಂದ
...ಪುಗಳ ಅಧ್ಯಾಪಕರಿಗೆ
... ಸಂಪರ್ಕ ಒದಗುವ

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ,
೧೯೮೩

ಪ್ರಕಾಶಕರು :

ಸಿ. ಎಸ್. ಕಣವಿ

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಮಾರ್ಚ್, ೧೯೮೩



[illegible] ೫೦ ಪೈಸೆ

[illegible] ಆಕಳವಾಡಿ,

[illegible]ಸ್,

[illegible]ತ, ಧಾರವಾಡ-೫೮೦ ೦೦೧.

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರಿಗೆ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ

ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನ ಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೪೩ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕ ಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು. ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತ ಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿ ಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಿ. ಎಂ. ನಂಜುಂಡಪ್ಪ
ಕುಲಪತಿಗಳು

# ನಿವೇದನೆ

"ಸಕಲ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯುಂ
ಬಾವಿಂ ಪ್ರತಿಪತ್ತಿಯುಂ" ವಡ್ಡಾರಾಧನೆ.

"ಜ್ಞಾನಿನಾಂ ಚಲಿತಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ"
ಶ್ರೀ ವಿದ್ಯಾರಣ್ಯ "ಪ್ರಜೆಯಂ ಪಾಲಿಸಬಲ್ಲೊಡಾತನ
ರಸಂ. ಕೈಯಾಶೆಯುಂ ಮಾಡದಂ ನಿಜಮಂತ್ರೀ
ಶ್ವರ............ಧರೆಯೊಳ್ ನಾನಾ ಚಮತ್ಕಾರಮಂ
ಅರಿಯಲ್ ಬಲ್ಲೊಡೆ ಮಂತ್ರಿಯಾಗು ಪ್ರಭು
ವಾಗಾರೆಂದೊಡಂ ಕೋಪಮಂ
ತೊರೆಯಲ್ ಬಲ್ಲೊಡೆ............
........ಶ್ರೀ ಚೆನ್ನಸೋಮೇಶ್ವರಾ"
—ಸೋಮನಾಥ

ಮೇಲಿನ ಮೂರು ಉಕ್ತಿಗಳನ್ನು ಪರಿಶೀಲಿಸಿದರೆ ಒಂದು ವಿಷಯ ಸ್ಪಷ್ಟ. ಅದೇನೆಂದರೆ, ರಾಜ್ಯದ ಆಡಳಿತ ಸೂತ್ರಗಳನ್ನು ಹಿಡಿದು ಅಧಿಕಾರ ಚಲಾಯಿಸುವ ವ್ಯಕ್ತಿ ಜ್ಞಾನಿಯೂ, ಸಕಲ ಶಾಸ್ತ್ರ ಪಾರಂಗತನೂ, ಸಮರ್ಥನೂ ಹಾಗೂ ಅಧ್ಯಾತ್ಮವಾದಿಯೂ ಆಗಿರತಕ್ಕದ್ದು. ಹಾಗಾದಾಗ ಮನುಕುಲದ ಉತ್ಕರ್ಷ ಸಾಧ್ಯ. ಮೇಲಿನ ಉಕ್ತಿಗಳ ಸಾರ ಸಂಗ್ರಹವನ್ನು ಯಥೋಚಿತವಾಗಿ ಸಾದರ ಪಡಿಸುವುದೇ ಈ ಪುಸ್ತಿಕೆಯ ಮೂಲ ಉದ್ದೇಶ.

"ಆದರ್ಶ ರಾಜ್ಯ" (Ideal State)ದ ಕಲ್ಪನೆಯೊಂದು ಬಹು ಸ್ವಾರಸ್ಯಕರ. ಅದರ ಸಮಗ್ರ ಚಿತ್ರಣ ಚೇತೋಹಾರಿ. ಭಾವ ಜೀವಿಗಳ ಸ್ಮರಣೆಗಂತೂ ಅಪೂರ್ವ ರೋಮಾಂಚನಕಾರಿ. ಆದಾಗ್ಯೂ ತಜ್ಞರು ಕಲ್ಪಿಸಿದ ಆದರ್ಶರಾಜ್ಯದ ಸ್ಪಷ್ಟ ಚಿತ್ರಣ ಒಂದೇ ತೆರನಾಗಿ ಮೂಡಿ ಬಂದಿಲ್ಲ. ಕಾಲ, ದೇಶ, ಸನ್ನಿವೇಶಕ್ಕನುಗುಣವಾಗಿ ಭಿನ್ನ ಭಿನ್ನ ಕಲ್ಪನೆಗಳಾಗಿವೆ. ಇದು ಸಹಜ. ಆದರೂ ಅದರ ಅರ್ಥವನ್ನು ಸ್ಥೂಲವಾಗಿ ಹೇಳುವುದಾದರೆ : ಚ್ಯುತಿ ಇಲ್ಲದ, ಸರ್ವರ ಅಭ್ಯುದಯವನ್ನು ಹಾರೈಸುವ; ಬಡತನ, ಅಜ್ಞಾನ, ದಾರಿದ್ರ್ಯ, ಅಸಮಾನತೆ ಇತ್ಯಾದಿ ಅನಿಷ್ಟಗಳಿಲ್ಲದ; ಪಕ್ಷ ಹಾಗೂ ಜಾತೀಯತೆಗಳಿಂದ ಅತೀತವಾದ; ವರ್ಗ ಹಾಗೂ ಶೋಷಣೆ ರಹಿತ; ಸಮೃದ್ಧ ಪೂರ್ಣ ಸಂಪನ್ನ ಸಮಾಜವೇ ಸುಖೀ ಸಮಾಜ ಅಥವಾ ಸುಖೀ ರಾಜ್ಯ ಎಂದರ್ಥ.

ಇಂತಹ ಸುಖೀ ರಾಜ್ಯದ ಕಲ್ಪನೆ ನಮಗೆ ಹೊಸದಲ್ಲ. ಅದನ್ನು ಕುರಿತು ಪ್ರಾಜ್ಞರು ಕಾಲದುದ್ದಕ್ಕೂ ಚಿಂತಿಸಿದ್ದಾರೆ. ಅವರ ಆಳವಾದ ಬುದ್ಧಿಮತ್ತೆಯಿಂದ ರಮ್ಯವಾದ ಕಾಲ್ಪನಿಕ ಚಿತ್ರಗಳು ಮೂಡಿ ಬಂದಿವೆ. ಉದಾಹರಣೆಗೆ ಮಧ್ಯ ಯುಗದ ಆಂಗ್ಲ ಮಹಾಶಯ ಥಾಮಸ್ ಮೂರ್ ಮೊದಲಿಗೆ "ಯುಟೋಪಿಯ" (Utopia) ಎಂಬ ಗ್ರಂಥ ರಚಿಸಿದ. ಅಲ್ಲಿಂದ ಕಾಲ್ಪನಿಕ ಆದರ್ಶರಾಜ್ಯಗಳ ಸೃಷ್ಟಿ ಪ್ರಾರಂಭವಾಯಿತು. ತರುವಾಯ, ಆದರ್ಶವಾದಿ (Idealists) ಗಳೆಂದು ಕರೆಯಲಾದ ಜರ್ಮನಿಯ ಕಾಂಟ್ ಮತ್ತು

ಹಿಗಲ್; ಇಂಗ್ಲಂಡಿನ ಗ್ರೀನ್, ಬ್ರ್ಯಾಡ್ಲಿ ಮತ್ತು ಬೊಸಾಂಕೆ ಮುಂತಾದ ತಜ್ಞರಿಂದ ಇನ್ನೊಂದು ತೆರನ ಆದರ್ಶರಾಜ್ಯದ ಕಲ್ಪನೆ ವಿಪುಲವಾಗಿ ಸೃಷ್ಟಿಯಾಯಿತು. ಹಾಗೆಯೇ ಸಮಾಜ ವಾದದ ಪ್ರವರ್ತಕರಾದ ರಾಬರ್ಟ್ ಓವೆನ್ ಕಾರ್ಲ್ ಮಾರ್ಕ್ಸ್ ಮುಂತಾದವರಿಂದ "ಸಮಾಜವಾದದ ಸುಖೀ ಸಮಾಜ" ಪ್ರತಿಪಾದಿತವಾಯಿತು. ' ಇದೂ ಕೂಡ ಆದರ್ಶ ರಾಜ್ಯದ ಇನ್ನೊಂದು ರೂಪ. ಅದೇ ತೆರನಾಗಿ ನಮ್ಮ ರಾಷ್ಟ್ರಪಿತ ಗಾಂಧೀಜಿಯವರು ಸರ್ವರ ಅಭ್ಯುದಯವನ್ನು ಹಾರೈಸುವ "ಸರ್ವೋದಯ" ಅಥವಾ "ರಾಮರಾಜ್ಯ"ದ ಕನಸು ಕಂಡರು. ಇದು ಅವರು ಕಲ್ಪಿಸಿದ ಆದರ್ಶ ರಾಜ್ಯಕ್ಕೆ ನಾವು ಕೊಡ ಬಹುದಾದ ಸ್ಪಷ್ಟ ನಿದರ್ಶನ. ಹೀಗೆ ಸರ್. ಥಾಮಸ್ ಮೂರ್‌ನಿಂದ ಎಚ್. ಜಿ. ವೆಲ್ಸ್‌ರವರವರೆಗೆ ವಿವಿಧ ತಜ್ಞ ರಿಂದ ಆದರ್ಶ ರಾಜ್ಯದ ಕಲ್ಪನೆ ಹಾಗೂ ಚಿಂತನಗಳು ನಿರಂತರವಾಗಿ ಮೂಡಿ ಬಂದಿವೆ. ಆ ಬಗ್ಗೆ ಒಂದು ವೈಜ್ಞಾ ನಿಕ ವಿಚಾರ ಧಾರೆ ಸತತವಾಗಿ ಹರಿದು ಬಂದಿರುವುದು ಸ್ಪಷ್ಟ. ಆದರೆ ಈ ವಿಚಾರಧಾರೆಯ ಮೂಲ ಪುರುಷ ಪ್ಲೇಟೋ. ಇವ ನಿಂದ ನಿರ್ಮಿತವಾದ "ರಿಪಬ್ಲಿಕ್" (Republic) ಒಂದು ಅಪೂರ್ವ ರೋಮಾಂಚನಕಾರೀ ಗ್ರಂಥ. ಆದರ್ಶದ ದಾರಿ ಯಲ್ಲಿ ಗಮಿಸುವ ದಾರ್ಶನಿಕರಿಗೆಲ್ಲ ದಾರಿದೀಪ. ಸ್ಫೂರ್ತಿಯ ಚಿಲುಮೆ. ವೈಜ್ಞಾನಿಕ ವಿಚಾರ ಧಾರೆಗೆ ಹೆಸರಿಸಬಹುದಾದ ಮೇರು ಕೃತಿ. ಗ್ರಂಥದಲ್ಲಿ ವ್ಯಕ್ತವಾದ ತೀಕ್ಷ್ಣ ವಿಚಾರ

ಧಾರೆ ಮತ್ತು ಭಾವ ವೈಭವ ಅಮೋಘವಾದುವು. ಅವುಗಳನ್ನು ಸ್ಮರಿಸುವುದೊಂದು ನಮ್ಮ ಪುಣ್ಯ.

ಆದರೆ ಕೆಲವರು ಹೀಗೂ ಹೇಳುವುದುಂಟು. ಆದರ್ಶವೆಂಬುದು ವ್ಯಕ್ತಿಯ ಜೀವನದಲ್ಲಿ ಸಾಧಿಸಲಾಗದ ಬರೀ ಭ್ರಮೆಯೆಂದೂ, ಅಂತಹ ರಾಜ್ಯ ವಾಸ್ತವ ಲೋಕಕ್ಕೆ ದೂರವಾದ ಕೇವಲ ಕಾಲ್ಪನಿಕವೆಂದೂ, ಅದು ಶುಷ್ಕ ತರ್ಕದ, ವ್ಯರ್ಥ ಜಿಜ್ಞಾಸೆಯ ಸಂಕೇತವೆಂದೂ ಜರೆಯುವುದುಂಟು. ಇಂಥಹ ವಿಚಾರ ಶುದ್ಧ ತಪ್ಪು. ಏಕೆಂದರೆ, ಕಾಲ್ಪನಿಕ ಅಥವಾ ಭಾವನಾತ್ಮಕವಾದುದೆಲ್ಲವೂ ಖಂಡಿತ ನಿಕೃಷ್ಟವಲ್ಲ. ಒಳಹೊಕ್ಕು ನೋಡಿದರೆ ಸತ್ಯಸಂಗತಿ ಗೋಚರಿಸದೇ ಇರದು. ಆ ಚಿಂತನಾ ಲಹರಿಯಲ್ಲಿ ಕ್ರಾಂತಿಯ ಕಿಡಿಗಳು ಸಿಡಿದಿವೆ. ಪ್ಲೇಟೋನಂತಹ ದಾರ್ಶನಿಕ ಮಹಾಶಯನ ಫಲವತ್ತಾದ ಬುದ್ಧಿಮತ್ತೆಯಿಂದ ಚಿಂತನೆಯ ರೂಪದಲ್ಲಿ ಹುಟ್ಟಿದ ವಿಷಯ ಅಥವಾ ವಿಚಾರ (Idea) ಕ್ಕೆ ಎಂತಹ ಪವಾಡ ಸದೃಶ ಪ್ರಚಂಡ ಶಕ್ತಿ ಅಡಗಿದೆ ಎಂಬುದು ನಮಗೆ ಹೇಗೆ ತಾನೇ ತಿಳಿಯಬೇಕು? ಪ್ರಾರಂಭದಲ್ಲಿ ನಮ್ಮ ಸಮಕಾಲೀನ "ಸೋಷಿಯಲಿಸಂ" ಹಾಗೂ "ಕಮ್ಯುನಿಸಂ" ಗಳು ಮೊದಲು ತಜ್ಞರ ಮಾನಸ ಪುತ್ರರಾಗಿಯೇ ಹೊರಬಂದುವು. ತರುವಾಯ ಸಿದ್ಧಾಂತ ರೂಪ ತಳೆದು ಇಡೀ ಜಗತ್ತನ್ನೇ ವ್ಯಾಪಿಸಿ, ಕ್ರಾಂತಿಗೆ ನಾಂದಿ ಹಾಡಿದುವು. ತನ್ಮೂಲಕ ವ್ಯಕ್ತಿ ಹಾಗೂ ಸಮಾಜದ ಸ್ವರೂಪವೇ ಬದಲಾಯಿತು. ಚರಿತ್ರೆಗೆ ಒಂದು ತಿರುವು ಕೊಡಲಾಯಿತು. ಹೀಗೆ ಆದರ್ಶ ವಾದದಿಂದ ಭೌತಿಕ ವಾದಕ್ಕೆ; ಕ್ರಾಂತಿಕಾರೀ

ಪ್ರಜಾಸತ್ತಾತ್ಮಕವಾದದಿಂದ ಸಮತಾವಾದಕ್ಕೆ ಪ್ರಪಂಚ ಪರಿವರ್ತನೆಯಾಗಿರುವುದನ್ನು ಸಮಕಾಲೀನ ಜಗತ್ತು ಮನಗಂಡಿದೆ. ಆದುದರಿಂದ ತಜ್ಞರ ವಿಚಾರಗಳು ಮಾನವನ ಮೇಲೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಿವೆ ಅಥವಾ ಪ್ರಪಂಚವನ್ನೇ ಆಳುತ್ತಿವೆ (Ideas rule the world) ಎಂಬ ನುಡಿಯಲ್ಲಿ ಸತ್ಯವಿದೆ. ಹಾಗೇ ಪ್ಲೇಟೋ ಚಿತ್ರಿಸಿದ ಆದರ್ಶರಾಜ್ಯ ಕಾಲ್ಪನಿಕವಾದರೂ ಅದರಲ್ಲಿ ಸತ್ಯವಿದೆ. ಆತನ ಚಿಂತನೆಯ ಗರ್ಭದಲ್ಲಿ ಮೂಡಿ ಬಂದ ವಿಚಾರಗಳು ಸಾಮಾನ್ಯವಾದುವುಗಳಲ್ಲ. ಮಾನವನ ಬದುಕಿನ ಗತಿಯನ್ನೇ ಬದಲಾಯಿಸುವ ಅಗಾಧ ಶಕ್ತಿ ಅವುಗಳಿಗಿವೆ. ಕಾರಣ ಪ್ಲೇಟೋ ಮಹಾನ್ ತತ್ವದರ್ಶಿ. ಒಬ್ಬ ವಿಭೂತಿ ಪುರುಷ. ಅವನು ಚಿಂತಿಸಿದ್ದೆಲ್ಲವೂ ವಿಭೂತಿಮತ್ತಾಗಿದೆ. ಅದು ಕಾರಣ ಆ ದಾರ್ಶನಿಕ ವಿಭೂತಿಗೆ ನಮೋ ಎನ್ನೋಣ—

ನಾವಿಂದು ಪರಿವರ್ತನೆಯ ಯುಗದಲ್ಲಿದ್ದೇವೆ. ಹಳೆಯ ಮೌಲ್ಯಗಳು ನಶಿಸಿ, ಹೊಸ ಮೌಲ್ಯಗಳಿಗೆ ಇಂಬುಗೊಡಲಾಗುತ್ತಿದೆ. ಆಧುನಿಕ ರಾಷ್ಟ್ರಗಳು ವಿವಿಧ ಸಿದ್ಧಾಂತಗಳನ್ನು ಸ್ವೀಕರಿಸಿ ಅಟ್ಟಹಾಸದಿಂದ ಮೆರೆಯುತ್ತಿವೆ. ಅವುಗಳ ಪ್ರಚಾರ ಕಾರ್ಯ ಭರದಿಂದ ಸಾಗಿದೆ. ನನ್ನ ಸಿದ್ಧಾಂತ ಮೇಲು, ತನ್ನ ಸಿದ್ಧಾಂತ ಮೇಲು ಎಂಬ ದುರಭಿಮಾನದ ಪೈಪೋಟಿ ಬೇರೆ. ಈ ಸೈದ್ಧಾಂತಿಕ ದ್ವೇಷ ಶೀತಲ ಸಮರಕ್ಕೆ ಎಡೆಮಾಡಿಕೊಟ್ಟು, ಮಾರಕಾಸ್ತ್ರಗಳ ತಯಾರಿಕೆ ಭರದಿಂದ ನಡೆದಿದೆ. ಒಟ್ಟಾರೆ ಜಗತ್ತಿನಲ್ಲಿ ಸ್ಫೋಟಕ ಪರಿಸ್ಥಿತಿಯುಂಟಾಗಿ ಮಾನವ ಕುಲ

ಸರ್ವನಾಶದ ಅಂಚಿನಲ್ಲಿ ತಳ್ಳಲ್ಪಟ್ಟಿದೆ. ಇನ್ನೊಂದೆಡೆ ದೇಶಗಳಲ್ಲಿ ವಿವಿಧ ರಾಜಕೀಯ ಪದ್ಧತಿಗಳು ಅಳವಡಿಸಲ್ಪಟ್ಟಿವೆ. ಅವುಗಳ ಕಾರ್ಯಾಚರಣೆಗಳಲ್ಲಿ ಕಂಡು ಬರುವ ಗುಣ-ದೋಷಗಳ ವಿಮರ್ಶೆಯಾಗುತ್ತಿದೆ. ಮತ್ತೆ ದಕ್ಷ ಆಡಳಿತವನ್ನು ಸ್ಥಾಪಿಸುವ ಮೂಲಕ ಜನತೆಯ ಜೀವನ ಮಟ್ಟವನ್ನು ಎತ್ತರಿಸುವ ಸತತ ಪ್ರಯತ್ನಗಳು ಪ್ರಭುತ್ವಗಳಿಂದ ನಡೆಯುತ್ತಿವೆ. ಅದೇ ವೇಳೆ ಸಮಾಜ ಹೇಗೆ ಸಂಘಟಿಸಲ್ಪಡಬೇಕು ? ರಾಜ್ಯ ಸರಕಾರಗಳ ಸ್ವರೂಪವೇನು ? ಆಡಳಿತ ಅಧಿಕಾರ ಯಾರಲ್ಲಿರಬೇಕು ? ಹೇಗಾದರೆ ವ್ಯಕ್ತಿಯ ಜೀವನ ಉಜ್ವಲಗೊಳ್ಳುತ್ತದೆ ? ವ್ಯಕ್ತಿಯ ಹಿತಸಮಾಜದ ಹಿತಕ್ಕೆ ಆಡಿಯಾಗಿರಬೇಕೇ ಅಥವಾ ಸಮಾಜದ ಹಿತ ವ್ಯಕ್ತಿಯ ಹಿತಕ್ಕೆ ಆಡಿಯಾಗಿರಬೇಕೇ ? ಎಂಬ ಇತ್ಯಾದಿ ವಿಷಯಗಳ ಮೇಲೆ ಜಿಜ್ಞಾಸೆ ನಡೆಯುತ್ತಲೇ ಇದೆ. ಅದೇ ತೆರನಾಗಿ ಯಾವ ರಾಜಕೀಯ ಸಿದ್ಧಾಂತವನ್ನು ಪುರಸ್ಕರಿಸಬೇಕು ? ಯಾವುದನ್ನು ತಿರಸ್ಕರಿಸಬೇಕು ? ಯಾವ ಪದ್ಧತಿ ಲೇಸು ?ಯಾವುದು ಲೇಸಲ್ಲ ? ಗುರಿಗಳೇನು ?ಸಾಧನೆಗಳೇನು ?ಅವುಗಳ ಯಶಸ್ಸು-ವೈಫಲ್ಯಗಳೆಷ್ಟು? ಹೀಗೆ ಹಲವು ವಿಷಯಗಳ ಬಗ್ಗೆ ಒಂದು ರಾಜಕೀಯ ಪ್ರಯೋಗವೇ ನಡೆಯುತ್ತಿದೆ. ಇಡೀ ಪ್ರಪಂಚವೇ ಪ್ರಯೋಗಶಾಲೆಯಾಗಿ ಮಾರ್ಪಟ್ಟಿದೆ ಎಂದರೆ ತಪ್ಪಾಗಲಾರದು. ಇಂತಹ ಸನ್ನಿವೇಶದಲ್ಲಿ ಪ್ಲೇಟೋನ "ರಿಪಬ್ಲಿಕ್" ಮೇಲ್ಕಾಣಿಸಿದ ಹಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಮಾನವ ಜನಾಂಗಕ್ಕೊಂದು ವಿಶಿಷ್ಟ ಸಂದೇಶವನ್ನು ಹೊತ್ತು ತರುತ್ತಿದೆ. ಆ ಸಂದೇಶ

ಕಾಲ, ದೇಶ, ಜನಾಂಗಗಳ ಎಲ್ಲೆ ಮೀರಿ ಮುನ್ನಡಿಯುತ್ತಿದೆ. ಆ ಮುನ್ನಡೆಯ ಮುಂಜಾವಿನಲ್ಲಿ ಮನುಕುಲದ ಉತ್ಕರ್ಷದ ಹೊಂಗಿರಣಗಳನ್ನು ನೋಡೋಣ.

ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ರಾಜ್ಯಶಾಸ್ತ್ರದಲ್ಲಿ ಬರುವ ವಿವಿಧ ಶಾಸ್ತ್ರಜ್ಞರು ಹಾಗೂ ಅವರು ಪ್ರತಿಪಾದಿಸಿದ ಸಿದ್ಧಾಂತಗಳನ್ನು ಅಭ್ಯಾಸ ಮಾಡುವುದರಲ್ಲಿ ಹೆಚ್ಚಿನ ಆಸಕ್ತಿ ತೋರಿಸಲಾಗುತ್ತಿತ್ತು. ಅದರಲ್ಲೂ ಪ್ಲೇಟೋನ ತಾತ್ವಿಕ ವಿಷಯುಗಳು ನನ್ನಲ್ಲಿ ಹೆಚ್ಚಿನ ಜಿಜ್ಞಾಸೆಗೆ ಎಡೆ ಕೊಟ್ಟವು. ಅದೇ ಆಸಕ್ತಪೂರ್ಣ ವಿಷಯವನ್ನು ಆಯ್ದುಕೊಂಡು, ಹೂವಿನ ಹಡಗಲಿ ತಾಲೂಕು, ಸೋಗಿ ಗ್ರಾಮದಲ್ಲಿ ಏರ್ಪಡಿಸಿದ್ದ ವ್ಯಾಸಂಗ ವಿಸ್ತರಣೋಪನ್ಯಾಸ ಶಿಬಿರದಲ್ಲಿ **"ಪ್ಲೇಟೋವಿನ ಆದರ್ಶರಾಜ್ಯ"** (Plato's Republic) ಎಂಬ ವಿಷಯವಾಗಿ ಕೊಟ್ಟ ಉಪನ್ಯಾಸವು ಈ ಕಿರು ಹೊತ್ತಿಗೆಯ ರೂಪದಲ್ಲಿ ಪ್ರಕಟವಾಗುತ್ತಿದೆ.

ಪ್ಲೇಟೋವಿನ **"ಆದರ್ಶ ಗಣರಾಜ್ಯ"**ದ ಸಂದುಗೊಂದುಗಳನ್ನು ಸಮೀಕ್ಷಿಸಿ, ಕೃತಿಯಲ್ಲಿ ಅಂತರ್ಗತವಾದ ಎಲ್ಲ ಪಹಲುಗಳನ್ನು ಹೆಕ್ಕಿ ತೆಗೆದು, ಒಂದು ಸಮಗ್ರ ಚಿತ್ರವನ್ನು ಕೊಡಲಾಗದಿದ್ದರೂ, ಈ ಕಿರು ಹೊತ್ತಿಗೆಯ ಇತಿ-ಮಿತಿಯನ್ನರಿತು, ಅದರ ಸಾರಸಂಗ್ರಹವನ್ನು ಸ್ಥೂಲವಾಗಿ ನಿರೂಪಿಸಿ ನಿವೇದಿಸಲು ಯತ್ನಿಸಲಾಗಿದೆ. ಆದರೂ ತಾತ್ವಿಕ ವಿಷಯುಗಳು ಕೊಂಚ ಜಟಿಲ. ಜನಸಾಮಾನ್ಯರಿಗೆ ಸುಲಭವಾಗಿ ಗ್ರಾಹ್ಯವಾಗುವುದು ಕಷ್ಟ. ಅದರಲ್ಲೂ ಪ್ಲೇಟೋನಂತಹ

ಮಹಾನ್ ದಾರ್ಶನಿಕನು ಪ್ರತಿಪಾದಿಸಿದ ವಿಷಯಗಳನ್ನು ಪಂಡಿತರಿಗೂ, ಪಾಮರರಿಗೂ ತೃಪ್ತಿಯಾಗುವಂತಹ ಪಡಿಯಚ್ಚಿನಲ್ಲಿ ಸಿದ್ಧಗೊಳಿಸಿ ನಿರೂಪಿಸುವುದು ಇನ್ನೂ ಕಷ್ಟ. ಆದಾಗ್ಯೂ, ಸಾಧ್ಯವಾದಮಟ್ಟಿಗೆ ವಿಷಯಗಳನ್ನು ಸರಳವಾಗಿ ವಿವರಿಸಲು ಪ್ರಯತ್ನಿಸಿದ್ದೇನೆ. ಸಹೃದಯಿಗಳು ಯಾವುದೇ ಲೋಪದೋಷಗಳಿದ್ದರೂ ಅವುಗಳನ್ನು ಗಣನೆಗೆ ತರದೆ, ಈ ಕಿರು ಹೊತ್ತಿಗೆಯನ್ನು ತುಂಬು ಹೃದಯದಿಂದ ಬರಮಾಡಿಕೊಂಡು ಪ್ರೋತ್ಸಾಹಿಸುವರೆಂದು ಹಾರೈಸುತ್ತೇನೆ.

ರಾಜಕೀಯ ತತ್ವಾಭ್ಯಾಸದಲ್ಲಿ ಹೆಚ್ಚಿನ ಆಸಕ್ತಿ ಮೂಡುವಂತೆ ಪ್ರೇರೇಪಿಸಿದ ನನ್ನ ವಿದ್ಯಾಗುರುಗಳಾದ, ಡಾ। ಎ. ಎಂ. ರಾಜಶೇಖರಯ್ಯ, ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥರು ಕರ್ನಾಟಕ ವಿಶ್ವವಿದ್ಯಾಲಯ, ಹಾಗೂ ದಿವಂಗತ ಗ. ಸ. ಹಾಲಪ್ಪ ಇವರುಗಳಿಗೆ ಆಭಾರಿಯಾಗಿದ್ದೇನೆ. ಅಲ್ಲದೆ, ಈ ಉಪನ್ಯಾಸವನ್ನು ಕೊಡಲು ಅವಕಾಶವನ್ನಿತ್ತು, ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನನ್ನ ಕೃತಜ್ಞತೆಗಳು.

ಕೊಟ್ಟೂರೇಶ್ವರ ಕಾಲೇಜ ಕೊಟ್ಟೂರು — ಟಿ. ಮಲ್ಲಪ್ಪ

## ಪರಿವಿಡಿ

# ೧. ಪ್ರಸ್ತಾವನೆ

ಪಾಶ್ಚಿಮಾತ್ಯರ ಸುಧೀರ್ಘ ಇತಿಹಾಸದಲ್ಲಿ ಅನೇಕ ಘಟನೆಗಳು ಜರುಗಿದುವು. ಆ ಘಟನಾವಳಿಯಲ್ಲಿ ಹಲವು ಮಹಾನ್ ವ್ಯಕ್ತಿಗಳು ವಿರಾಜಿಸಿದರು. ಕಾಲಗತಿಯಲ್ಲಿ ಆ ಘಟನೆಗಳು ಹೇಗೆ ಉದ್ಭವಿಸಿದುವೋ ಹಾಗೆಯೇ ಕಣ್ಮರೆಯಾದವು. ಅದೇ ತೆರನಾಗಿ ಕೆಲವು ಮಹಾನ್ ವ್ಯಕ್ತಿಗಳು ಆಗಾಗ ವಿಜೃಂಭಿಸಿ ಅಸ್ತಂಗತರಾದರು. ಹೀಗಾಗುವುದು ಸಹಜ. ಏಕೆಂದರೆ, ಇತಿಹಾಸದಲ್ಲಿ ಉಳಿಯುವುದೆಷ್ಟೋ ಅಳಿಯುವುದೆಷ್ಟೋ ಈ ನಶ್ವರ ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ ಎಲ್ಲ ಅನಿಶ್ಚಿತ. ಆದರೂ ಆ ಇತಿಹಾಸದ ಪಥದಲ್ಲಿ ಮೂವರ ಹೆಸರುಗಳು ಮಾತ್ರ ಪಂಡಿತೋತ್ತಮರ ಪ್ರೀತಿ ಗೌರವಗಳಿಗೆ ಪಾತ್ರವಾಗಿ ಇಂದಿಗೂ ಅಮರವಾಗಿವೆ. ಅವರು ಬೇರೆ ಯಾರೂ ಅಲ್ಲ. ಲೋಕವಿಖ್ಯಾತರಾದ ಸೋಕ್ರಟೀಸ್, ಪ್ಲೇಟೋ ಮತ್ತು ಅರಿಸ್ಟಾಟಲ್. ಈ ಮೂವರು ಮಹಾನುಭಾವರು ಚಿರಸ್ಮರಣೀಯರು. ಪ್ರಾಚೀನ ಗ್ರೀಕ್ ಸಂಸ್ಕೃತಿಯ ಚಿಂತಾಮಣಿಗಳು. ಅಷ್ಟೇ ಅಲ್ಲ. ಪ್ರಪಂಚ ಕಂಡು ಅಚ್ಚರಿಪಡುವ ಅಪೂರ್ವ "ಗುರುಶಿಷ್ಯ" ಪರಂಪರೆಗೆ ಸೇರಿದವರುವ ಪಾಶ್ಚಾತ್ಯ ವಿಧ್ವತ್ ಪ್ರಪಂಚದ ಮಹಾನ್ ದಿಗ್ಗಜಗಳು ! ಜ್ಞಾನದ ವಿವಿಧ ಕ್ಷೇತ್ರಗಳಲ್ಲಿ ಅಪ್ರತಿಮ ಪರಿಣತೆಯನ್ನು ಪಡೆದ ಪ್ರಭೃತಿಗಳು !! ಜ್ಞಾನ ಭಂಡಾರವನ್ನು ಸೂರೆಗೈದ ದಾರ್ಶನಿಕತ್ರಯರು !!!

ಆದರೂ ಈ ಮೂವರಲ್ಲಿಯೂ ಒಂದೊಂದು ವೈಶಿಷ್ಟ್ಯವನ್ನು ಕಾಣುತ್ತೇವೆ. ಸೋಕ್ರಟೀಸ್ ಲೋಕ ವಿಖ್ಯಾತ ತಾತ್ವಿಕ. ಪ್ರಪಂಚದ ವಿಸ್ಮಯಕಾರೀ ವ್ಯಕ್ತಿಗಳಲ್ಲಿ ಒಬ್ಬನೆಂದು ಪ್ರಸಿದ್ಧನಾಗಿದ್ದಾನೆ. ತತ್ವಪ್ರಪಂಚದ ದಿಗಂತದಲ್ಲಿ ಹೊಳಗುವ ಧ್ರುವತಾರೆ. ಈ ಮಹಾಪುರುಷ ಗತಿಸಿ ಇಂದಿಗೆ ಎರಡು ಸಾವಿರದ ನಾನ್ನೂರು ವರ್ಷಗಳು ಗತಿಸಿದ್ದರೂ ಆತನ ಬುದ್ಧಿ ಶಕ್ತಿಗೆ ಜಗತ್ತು ಅಚ್ಚರಿಪಡುತ್ತಿದೆ. ಪಾಶ್ಚಾತ್ಯ ತತ್ವಪ್ರವಾಹಗಳಿಗೆ ಮೂಲ ಪುರುಷನಾಗಿ ಪರಿಗಣಿಸಲ್ಪಟ್ಟಿದ್ದಾನೆ. ಇಂದಿಗೂ ಇವನನ್ನು ತತ್ವಜ್ಞಾನಿಗಳ ಆಚಾರ್ಯ ಪುರುಷನೇದು ಭಾವಿಸಲಾಗುತ್ತಿದೆ. ಜ್ಞಾನಾರ್ಜನೆಯೇ ಮನುಷ್ಯನ ಮೂಲ ಧ್ಯೇಯವೆಂದೂ, ಅದನ್ನು ಪಡೆಯುವುದಕ್ಕಿಂತ ಶ್ರೇಯಸ್ಕರವಾದುದು ಜೀವನದಲ್ಲಿ ಬೇರಾವುದೂ ಇಲ್ಲವೆಂದು ನಂಬಿದ್ದ. ಆದುದರಿಂದ ಸೋಕ್ರಟೀಸನನ್ನು “ಜ್ಞಾನದ ಮೂರ್ತರೂಪ” ವೆಂದರೆ ತಪ್ಪಾಗಲಾರದು. ಸಾಟಿ ಇಲ್ಲದ ಜ್ಞಾನ ಅವನದು. ಸಮಕಾಲೀನ ಗ್ರೀಸ್‌ನಲ್ಲಿ “ಸೋಕ್ರಟೀಸನನ್ನು ಮೀರಿಸುವ ಜ್ಞಾನಿಗಳು ಯಾರೂ ಇರಲಿಲ್ಲ” ವೆಂದು ಡೆಲ್ಫಿಯ ದೇವವಾಣಿಯಿಂದ ಸ್ಪಷ್ಟೀಕರಿಸಲ್ಪಟ್ಟಿತ್ತು. ಥಿಯೋಡರ್ ಗೋಂಪರ್ಜೆಯವರ ಮಾತಿನಲ್ಲಿ ಹೇಳುವುದಾದರೆ: “ಮತ ಸ್ಥಾಪಕರನ್ನು ಬಿಟ್ಟರೆ ಮನುಕುಲದ ಮಾನಸಿಕ ಜೀವನದ ಮೇಲೆ ಸೋಕ್ರಟೀಸನಷ್ಟು ಶಾಶ್ವತವಾದ ಪ್ರಭಾವವನ್ನು ಬೀರಿರುವ ವ್ಯಕ್ತಿ ಇನ್ನೊಬ್ಬನಿಲ್ಲ” ಎಂದಿದ್ದಾರೆ. ಈ ಮಾತೇ ಸಾಕು. ಬೇರೇ ನಿದರ್ಶನ ಬೇಕಿಲ್ಲ,

ಆತನ ಅಪ್ರತಿಮ ಪ್ರತಿಭೆ ಎಂತಹದೆಂದು ಎತ್ತಿಹಿಡಿಯಲು. ಇನ್ನು ಸೋಕ್ರಟೀಸ್ ಪ್ರತಿಪಾದಿಸಿದ ವಿಷಯಗಳು ಬಹು ಅಮೋಘವಾಗಿವೆ. ಮನುಷ್ಯ "ತನ್ನನ್ನು ತಾನು ಅರಿ"ಯ ಬೇಕೆಂದೂ, "ಆತ್ಮಜ್ಞಾನವೇ ನಿಜವಾದ ಜ್ಞಾನ"ವೆಂದೂ; "ಜ್ಞಾನ" (Knowledge) 'ಸದ್ಗುಣ' (Virtue) ಮತ್ತು ಸೌಖ್ಯ (Happiness) ಗಳ ಸಮನ್ವಯವನ್ನು ವ್ಯಕ್ತಿಗಳು ಸಾಧಿಸಬೇಕೆಂದೂ ಬೋಧಿಸಿದ ಮಹಾನುಭಾವ. ನಶ್ವರವಾದ ದೇಹಕ್ಕಿಂತ ಶಾಶ್ವತವಾದ ಸತ್ಯದೊಡ್ಡದು; ರಾಜಕಾರಣ ನೀತಿಯ ಮೇಲೆ ಆಧಾರಗೊಂಡಿರಬೇಕು; ಸರ್ವಕ್ಕೂ ನೀತಿಪರತೆ ಮುಖ್ಯಾವಲಂಬನೆಯಾಗಿರತಕ್ಕದ್ದೆಂದು ಪ್ರತಿಪಾದಿಸಿದ. ನ್ಯಾಯ, ಸತ್ಯ, ಧರ್ಮ ಮುಂತಾದ ಆದರ್ಶಕ್ಕೋಸ್ಕರ 'ಹೆಮ್‌ಲಾಕ್' ಎಂಬ ಕಾಳಕೂಟ ವಿಷವನ್ನು ಪಾನಮಾಡಿ ಪ್ರಾಣಾರ್ಪಣೆ ಮಾಡಿದ ಮಹಾನ್ ದಾರ್ಶನಿಕ. ಇಂತಹ ವಿಶಿಷ್ಟ ವ್ಯಕ್ತಿತ್ವ ವನ್ನು ಕಂಡ ಬರ್‌ಟ್ರೆಂಡ್ ರಸೆಲ್‌ರವರು ಜಗತ್ತಿನ ಮಹಾ ಪುರುಷರಾದ ಬುದ್ಧ,ಕ್ರಿಸ್ತರಿಗಿರುವ ಉನ್ನತ ಸ್ಥಾನವನ್ನು ಸೋಕ್ರಟೀಸ್‌ನಿಗೆ ಕಲ್ಪಿಸಿ ಕೊಟ್ಟಿದ್ದಾರೆ. ಇಂತಹ ವ್ಯಕ್ತಿಗಳು ಉದಯಿಸುವುದು ಬಹು ಅಪರೂಪ. ಮಾನವ ಕೋಟಿಯ ಪುಣ್ಯದ ಫಲವೋ ಎಂಬುವಂತೆ, ಸಾವಿರ ಸಾವಿರ ವರ್ಷ ಕ್ಕೊಮ್ಮೆ ಜಗತ್ತು ಇಂತಹ ಮಹಾನುಭಾವರನ್ನು ಕಾಣುತ್ತದೆ.

ಗುರುವಿಗೆ ತಕ್ಕ ಶಿಷ್ಯ ಪ್ಲೇಟೋ. ಕಲ್ಪನಾ ವಿಲಾಸಕ್ಕೂ, ಪ್ರಗಲ್ಭಪಾಂಡಿತ್ಯಕ್ಕೂ ಹೇಳಿ ಮಾಡಿಸಿದ ವ್ಯಕ್ತಿ, ನೈತಿಕ ಜೀವನಕ್ಕೆ ಮಹತ್ವಕೊಟ್ಟ ಮಹಾ ಆದರ್ಶವಾದಿ ಹಾಗೂ

ಪ್ರಸಿದ್ಧ ತತ್ವವೇತ್ತ. ತಾತ್ವಿಕ ಕ್ಷೇತ್ರದಲ್ಲಿ ಬಹು ದೊಡ್ಡ ಸ್ಥಾನ ಇವನಿಗಿದೆ. ಯುರೋಪಿಯನ್ನರು ಈತನನ್ನು 'ತತ್ವ ಜ್ಞಾನದ ಜನಕ'ನೆಂದು ಕರೆದಿದ್ದಾರೆ.

ಈ ಗುರು ಶಿಷ್ಯ ಪರಂಪರೆಯಲ್ಲಿ ಮೂರನೇಯವನೇ ಅರಿಸ್ಟಾಟಲ್. ಪ್ಲೆಟೊವಿನ ಅಚ್ಚುಮೆಚ್ಚಿನ ಶಿಷ್ಯ. ಪಾಶ್ಚಾತ್ಯ ವಿಜ್ಞಾನ ಇತಿಹಾಸದಲ್ಲಿ ಚಿರಸ್ಥಾಯಿಯಾದ ಸ್ಥಾನವನ್ನುಗಳಿಸಿದವನು. ಅದಕ್ಕೆಂದೇ ಈತನನ್ನು "ವಿಜ್ಞಾನದ ಜನಕ" ನೆಂದು ಕರೆಯಲಾಗುತ್ತವೆ. ಪ್ಲೇಟೊ ಆದರ್ಶವಾದಿಯಾದರೆ, ಅರಿಸ್ಟಾಟಲ್ ವಾಸ್ತವವಾದಿ. ವಾಸ್ತವಿಕ ದೃಷ್ಟಿಕೋನ ಹಾಗೂ ಬಹು ಮುಖ ಪ್ರತಿಭೆಗೆ ಇನ್ನೊಂದು ಹೆಸರು ಅರಿಸ್ಟಾಟಲ್. ಜಗತ್ತನ್ನೇ ಗೆಲ್ಲುತ್ತೇನೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ಗ್ರೀಕ್ ಯುದ್ಧ ವೀರ ಅಲೆಗ್ಝಾಂಡರ್‌ನಿಗೆ ಗುರುವಾದವನು. ಇವನದು ವಿದ್ವತ್ ಪ್ರಪಂಚದಲ್ಲಿ ಬಹು ದೊಡ್ಡ ಸ್ಥಾನ. ಪ್ರಸಿದ್ಧ ವಿಜ್ಞಾನಿಯೂ, ದಾರ್ಶನಿಕನೂ, ಸಾಹಿತಿಯೂ, ವಿಮರ್ಶಕನೂ ಆದ ಅರಿಸ್ಟಾಟಲ್‌ನ ಹೆಸರನ್ನು ಕೇಳದವರೇ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಈತನು ವಿಚಾರ ಹಾಗೂ ಚಿಂತನೆ ಮಾಡದೇ ಇದ್ದ ವಿಷಯಗಳಿಲ್ಲ. ಅನೇಕ ಶಾಸ್ತ್ರಗಳಲ್ಲಿ ಪ್ರಾಂಡಿತ್ಯ ಪೌಢಿಮೆಗಳನ್ನು ಗಳಿಸಿದ್ದರಿಂದ ಇವನಿಗೆ ''ಸರ್ವಶಾಸ್ತ್ರವಿಶಾರದ'' ನೆಂದೂ, 'ಚಲಿಸುವ ವಿಶ್ವಕೋಶ' ವೆಂದೂ ವರ್ಣಿಸಲಾಗಿದೆ. ಡಾಂಟೆ ಮಹಾಶಯನ ಮಾತಿನಲ್ಲಿ ಹೇಳುವುದಾದರೆ ಇವನೊಬ್ಬ 'ಬಲ್ಲಿದರ ಗುರು.' ರಾಜ್ಯ ಶಾಸ್ತ್ರ, ಭೌತ ಶಾಸ್ತ್ರ, ಪ್ರಾಣಿಶಾಸ್ತ್ರ, ಜೀವಶಾಸ್ತ್ರತರ್ಕ ಶಾಸ್ತ್ರ, ನೀತಿಶಾಸ್ತ್ರ, ಮಾನವಶಾಸ್ತ್ರ, ಗಣಿತ, ಕಾವ್ಯ, ವಿಮರ್ಶೆ, ವಾಕ್

ಪಟುತ್ವ (Rhetorie) ಮುಂತಾದುವುಗಳ ಮೇಲೆ ಪ್ರಭುತ್ವ ವನ್ನು ಪಡೆದ ಕೀರ್ತಿ ಇವನದು. ಪ್ರಭುತ್ವ ಮಾತ್ರವಲ್ಲ, ಅವುಗಳಮೇಲೆ ವೈಜ್ಞಾನಿಕ ಹಾಗೂ ವಿದ್ವತ್ಪೂರ್ಣಗ್ರಂಥ ಗಳನ್ನೂ ಬರೆದ ಮಹಾಶಯ. ಒಬ್ಬ ವ್ಯಕ್ತಿ ಏಕಕಾಲಕ್ಕೆ ಜ್ಞಾನದ ವಿವಿಧ ಪ್ರಕಾರಗಳಲ್ಲಿ ಇಷ್ಟೊಂದು ಪ್ರಾವೀಣ್ಯ ಹಾಗೂ ಪ್ರತಿಭೆಯನ್ನು ಸಂಪಾದಿಸಿರುವುದು ಜಗತ್ತಿನ ಇತಿ ಹಾಸದಲ್ಲಿಯೇ ಬಹು ವಿರಳ. ಇಂತಹ ಅಪ್ರತಿಮ ಪರಿಣತಿ ಯನ್ನು ಪಡೆದ ವ್ಯಕ್ತಿಗಳನ್ನು ಹೊಂದಿದ ಪ್ರಾಚೀನ ಗ್ರೀಸ್ ಜಗತ್ತಿಗೆ ತನ್ನದೇ ಆದ ಕೊಡುಗೆಯನ್ನು ಕೊಟ್ಟು, ಮಧ್ಯ ಯುಗದಲ್ಲಿ ಪ್ರಾರಂಭವಾದ "ನವೋದಯ" (Renaissance) ಕ್ಕೆ ನಾಂದಿ ಹಾಡಿ ಆಧುನಿಕ ಜಗತ್ತು ರೂಪಗೊಳ್ಳುವ ವಿಷಯದಲ್ಲಿ ವಿಶಿಷ್ಟ ಪಾತ್ರವಹಿಸಿತು.

## ೨. ಪ್ಲೇಟೋವೃತ್ತಾಂತ

(ಕ್ರಿ. ಪೂ. 427–347)

ಬಲ್ಲವರು ಹೇಳುವ ಮಾತು: ಒಂದಿಷ್ಟು ಇತಿಹಾಸ ನಿರ್ಮಿಸಲು ಕೆಲವು ಶತಮಾನಗಳೇ ಉರುಳಬೇಕು. ಹಾಗೆ ಪ್ಲೇಟೋನಂತಹ ಮೇಧಾವಿ ಜನಿಸಲು ಹಲವು ಶತಮಾನಗಳ ಕಾಲ ಮಾನವ ಕುಲ ಕಾಯಬೇಕು. ಅಂದರೆ ಅಪರೂಪ ಕ್ಕೊಮ್ಮೆ ಇಂಥಹ ಮಹಾನುಭಾವರು ಜನಿಸುತ್ತಾರೆ. ತಮ್ಮ ಜೀವನ ಹಾಗೂ ದರ್ಶನದ ಮೂಲಕ ವಿಶ್ವಮಾನ್ಯತೆಯನ್ನು

ಪಡೆಯುತ್ತಾರೆ. ಅಂಥವರ ಜೀವನ ವೃತ್ತಾಂತ ಸಹಜವಾಗಿ ವೈಶಿಷ್ಟ್ಯ ಪೂರ್ಣವಾಗಿರುತ್ತದೆ.

ಪ್ಲೇಟೋ ಸೋಕ್ರಟೀಸ್‌ನ ಅಚ್ಚುಮೆಚ್ಚಿನ ಶಿಷ್ಯ. ಉದ್ದಾಮ ಪಂಡಿತನೂ, ಮಹಾಪ್ರತಿಭಾಶಾಲಿಯೂ ಅಲ್ಲದೆ ಅಸದೃಶ ತತ್ವಜ್ಞಾನಿಯೂ ಹೌದು. ಜೊತೆಗೆ ಅವನೊಬ್ಬ ಚಿಂತನಕಾರ. ಆಥೆನ್ಸ್ ನಗರದ ಉಚ್ಚ ಹಾಗೂ ಶ್ರೀಮಂತ ಕುಲದಲ್ಲಿ ಜನಿಸಿದವನು. ಇವನ ಪೂರ್ವಜರೆಲ್ಲ ಉತ್ತಮ ವಂಶಸ್ಥರು. ಅವರೆಲ್ಲ ಶ್ರೀಮಂತ ಇಲ್ಲವೇ ಅರಸು ಮನೆತನದ ಪರಂಪರೆಗೆ ಸೇರಿದವರು. ಪ್ರಾರಂಭದಿಂದ ಆಥೆನ್ಸ್ ನಗರ-ರಾಜ್ಯದ ಆಗು ಹೋಗುಗಳಲ್ಲಿ ಸಕ್ರಿಯ ಪಾತ್ರವಹಿಸಿದ ಪ್ರಭಾವಶಾಲಿಗಳು. ಉದಾಹರಣೆಗೆ ಪ್ರಸಿದ್ಧ ಶಾಸನಕಾರ ಸೋಲನ್ ಪ್ಲೆಟೋವಿನ ತಾಯಿಗೆ ಹತ್ತಿರದ ಬಂಧು. ಪ್ರಜಾಪ್ರಭುತ್ವ ಪ್ರವರ್ತಕನಾದ ಪೆರಿಕ್ಲಸ್ ಮಹಾಶಯ ತಂದೆಯ ಕಡೆಯಿಂದ ಈತನಿಗೆ ಹತ್ತಿರದ ಸಂಬಂಧಿ. ಹೀಗೆ ಶ್ರೀಮಂತಿಕೆಯ ಸನ್ನಿವೇಶ ಮತ್ತು ವ್ಯಕ್ತಿಯ ಸ್ವಭಾವಗಳ ಸಮ್ಮಿಲನದಿಂದಲೋ ಏನೋ ಪ್ಲೆಟೋ ಪ್ರಜಾಪ್ರಭುತ್ವದ ತತ್ವ ಹಾಗೂ ಆದರ್ಶಗಳಿಗೆ ವಿರೋಧಿಯಾಗಿದ್ದುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಶ್ರೀಮಂತಿಕೆಯ ರಕ್ತಗುಣವೇ ಹಾಗೆ ಎಂದರೆ ತಪ್ಪಾಗಲಾರದು. ಅದು ಏನೇ ಇರಲಿ, ಪ್ಲೆಟೋ ಸಮಕಾಲೀನ ಗ್ರೀಸ್‌ನಲ್ಲಿ ವಿದ್ವತ್ ಜನರ ಗಮನವನ್ನು ಬಹು ಬೇಗ ತನ್ನೆಡೆಗೆ ಸೆಳೆದುಕೊಳ್ಳುತ್ತಾನೆ. ಕೇವಲ ಹತ್ತೊಂಬತ್ತು ವಯಸ್ಸಿಗೆ ಪ್ರೌಢ ತತ್ವ ಜ್ಞಾನಿಯಾಗುವಷ್ಟು

ಪಾಂಡಿತ್ಯ ಪ್ರತಿಭೆಗಳು ಅವನಿಗೆ ಕರಗತವಾಗುತ್ತವೆ. ತತ್ತ್ವ ಶಾಸ್ತ್ರ, ನೀತಿಶಾಸ್ತ್ರ, ಗಣಿತ, ಸಾಹಿತ್ಯ, ಸಂಗೀತ, ತರ್ಕಶಾಸ್ತ್ರ ಇತ್ಯಾದಿ ವಿಷಯಗಳಲ್ಲಿ ಅಪಾರ ಪಾಂಡಿತ್ಯವನ್ನು ಸಂಪಾದಿಸುತ್ತಾನೆ. ಭಾಷಣ ಕಲೆ ಕರಗತವಾದ್ದರಿಂದ ಇವನೊಬ್ಬ ಪ್ರಸಿದ್ಧ ವಾಗ್ಮಿಯಾಗಿದ್ದ. ಇಂತಹ ಬಹುಮುಖ ಪ್ರತಿಭೆಯ ಜೊತೆಗೆ ಪ್ಲೆಟೋ ನೋಡಲು ಸುಂದರರೂಪಿ. ಆಕರ್ಷಕ ಅಂಗ ಸೌಷ್ಟವವನ್ನು ಪಡೆದ ಕಟ್ಟಾಳು. ವಿಶಾಲ ಹಾಗೂ ಸದೃಢ ಬಾಹುಗಳನ್ನು ಪಡೆದಿದ್ದುದರಿಂದಲೋ ಏನೋ 'ಪ್ಲೇಟೋ' ಎಂಬ ಹೆಸರನ್ನು ಅನ್ವರ್ಥಗೊಳಿಸಿದ್ದನೆಂದು ಒಂದೆಡೆ ಹೇಳಲಾಗಿದೆ. ಮಲ್ಲಯುದ್ಧದಲ್ಲಿ ಪಳಗಿದ ವ್ಯಕ್ತಿ. ಸುಪ್ರಸಿದ್ಧ ಕ್ರೀಡಾ ಪಟುವೂ ಹೌದು. ಹಲವು ಯುದ್ಧಗಳಲ್ಲಿ ಶೌರ್ಯದಿಂದ ಕಾದಿದ ಖ್ಯಾತಿ ಇವನದು. ಕಾರಣ ಪ್ಲೇಟೋ ಕವಿಯೂ, ಕಲಿಯೂ ಆಗಿದ್ದನೆಂಬುದು ಸುಸ್ಪಷ್ಟ. ಹೀಗೆ ಮಹಾ ವ್ಯಕ್ತಿಗಳು ಜನಿಸುವುದು ಅಪೂರ್ವ. ಆದರೆ ಆ ಮಹಾ ವ್ಯಕ್ತಿತ್ವದ ಜೊತೆಗೆ ಕಲಿಯೂ, ಕವಿಯೂ ಮತ್ತು ದಾರ್ಶನಿಕನೂ ಆಗಿರುವುದು ಅತ್ಯಪೂರ್ವ. ಒಬ್ಬ ವ್ಯಕ್ತಿ ತನ್ನ ಜೀವಿತದ ಅಲ್ಪ ಅವಧಿಯಲ್ಲಿ ಎಷ್ಟೊಂದು ಸಾಧಿಸಬಲ್ಲನೆಂಬುದಕ್ಕೆ ಪ್ಲೇಟೋ ಸಾಕ್ಷಿ. ಶ್ರೀಮಂತಿಕೆಯಲ್ಲಿ ಜನಿಸಿ ಸಕಲ ಭೋಗ ಭಾಗ್ಯಗಳಿದ್ದರೂ ಸುಖಾಪೇಕ್ಷೆಯ ಕಡೆ ಮನಸ್ಸನ್ನು ಎಂದೂ ತಿರುಗಿಸಲಿಲ್ಲ. ಸ್ವಹಿತದಲ್ಲಿ ಆಸಕ್ತನಾಗದೆ ವಿಮುಖನಾಗಿದ್ದ. ಈ ತೆರನ ದೃಷ್ಟಿಕೋನ ಎಲ್ಲರಿಗೂ ಇರಲು ಸಾಧ್ಯವಿಲ್ಲ.

# ೩. ಅಕ್ಯಾಡಮಿಯ ಸ್ಥಾಪನೆ

ಸಾಹಿತ್ಯ, ಸಂಗೀತ, ಕ್ರೀಡೆ ಮುಂತಾದುವುಗಳಲ್ಲಿ ಸದಾ ಮನಸ್ಸನ್ನು ಕೇಂದ್ರೀಕರಿಸಿದ್ದ ತರುಣ ಪ್ಲೇಟೋ ಕ್ರಮೇಣ ಅವುಗಳ ಬಗ್ಗೆ ಇದ್ದ ಆಸಕ್ತಿಯನ್ನು ಕಳೆದು ಕೊಳ್ಳುತ್ತಾನೆ. ಸಮಾಜದ ಸಮಸ್ಯೆಗಳು ಹಾಗೂ ಅವುಗಳ ನಿವಾರಣೋಪಾಯಗಳನ್ನು ಕುರಿತು ಚಿಂತನೆಯಲ್ಲಿ ಮಗ್ನನಾಗುತ್ತಾನೆ. ಈ ವೇಳೆಗೆ ಸೋಕ್ರಟೀಸ್‌ನ ಹಿರಿಮೆಯನ್ನು ಅರ್ಥಮಾಡಿಕೊಳ್ಳದೆ ಅಥೆನ್ಸಿನ ರಾಜಕಾರಣಿಗಳು ಅವನನ್ನು ವಿಷಕೊಟ್ಟು ಕೊಂದುದರಿಂದ ಅಂದಿನ ರಾಜ ಕಾರಣದಲ್ಲಿ ಜಿಗುಪ್ಸೆಗೊಂಡು, ಹುಟ್ಟೂರನ್ನೇ ತೊರೆಯುತ್ತಾನೆ. ಮೆಗರಾ, ಸಿರೀನ್, ಈಜಿಪ್ತ್, ಸಿರಾಕ್ಯೂಸ್ ಮುಂತಾದ ದೇಶಗಳನ್ನೂ ಸುತ್ತುತ್ತಾನೆ. ಸುಮಾರು ಹನ್ನೆರಡು ವರ್ಷಗಳ ದೀರ್ಘಕಾಲದ ದೇಶ ಪರ್ಯಟನ ಮುಗಿಸಿ, ಅಪಾರ ಅನುಭವ ಪಡೆದು ತನ್ನ ಸ್ವದೇಶವಾದ ಆಥೆನ್ಸ್‌ಗೆ ಮರಳುತ್ತಾನೆ.

ಇದಾದ ನಂತರ ಲೋಕ ವಿಖ್ಯಾತವಾದ ''ಅಕ್ಯಾಡಮಿ'' ಎಂಬ ವಿಶ್ವವಿದ್ಯಾಲಯದ ಮಟ್ಟದ ವಿದ್ಯಾಪೀಠವನ್ನು ಸ್ಥಾಪಿಸಿದನು. ಇದು ಸುಮಾರು ಒಂಬೈನೂರು ವರ್ಷಗಳ ದೀರ್ಘ ಕಾಲ ಶಿಕ್ಷಣದ ಮಹಾನ್ ಕೇಂದ್ರವಾಗಿ ಮೆರೆಯಿತು. ಇಂದು ನಾವು "ಅಕ್ಯಾಡಮಿ" ಎಂಬ ಪದವನ್ನು ವಿಶೇಷ ವಿದ್ವತ್ತು ಎಂಬುದನ್ನು ಸೂಚಿಸಲು ಉಪಯೋಗಿಸುತ್ತೇವೆ.

ಸಾಹಿತ್ಯ ಅಕ್ಯಾಡಮಿ, ಸಂಗೀತ ಮತ್ತು ನಾಟಕ ಅಕ್ಯಾಡಮಿ ಎಂಬುದಾಗಿ ಪದ ಪ್ರಯೋಗ ಮಾಡುತ್ತೇವೆ. ಈ ಪ್ರಯೋಗ ಪ್ಲೆಟೋನಿಂದಲೇ ಆರಂಭವಾದದ್ದು ಎಂಬುದು ಅನೇಕರಿಗೆ ತಿಳಿದಿಲ್ಲ. ಈ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರ, ಖಗೋಳಶಾಸ್ತ್ರ, ಗಣಿತ, ಇತಿಹಾಸ, ಸಾಹಿತ್ಯ, ಸಂಗೀತ, ಕಾಯಿದೆ, ದರ್ಶನ, ನೀತಿ ಶಾಸ್ತ್ರ ಇತ್ಯಾದಿ ವಿಷಯಗಳ ಬಗ್ಗೆ ಉನ್ನತ ವ್ಯಾಸಂಗ ಜರುಗುತ್ತಿತ್ತು. ದೇಶ ವಿದೇಶಗಳಿಂದ ವಿದ್ಯಾರ್ಥಿಗಳು ಆಕರ್ಷಿತರಾದರು. ಇಲ್ಲಿ ವ್ಯಾಸಂಗ ಮಾಡುವುವುದೊಂದು ಅಪೂರ್ವ ಪುಣ್ಯವೆಂದು ಭಾವಿಸಲಾಗುತಿತ್ತು. ಕಂಡವರಿಗೆ ಪ್ರವೇಶಾವಕಾಶವಿರಲಿಲ್ಲ * ಪ್ರತಿಭಾವಂತರಿಗೆ ಮಾತ್ರ ಪುರಸ್ಕಾರ. ಇಲ್ಲಿ ವ್ಯಾಸಂಗ ಮಾಡುವ ವ್ಯಕ್ತಿಗೆ ಸಮಾಜದಲ್ಲಿ ಗಣ್ಯಸ್ಥಾನ ಮೀಸಲು, ಒಟ್ಟಾರೆ, ಸಮಕಾಲೀನ ಗ್ರೀಕ್ ಪ್ರಪಂಚದಲ್ಲಿ ಅಕ್ಯಾಡಮಿ ವಿದ್ವಜ್ಜನರ ಕೇಂದ್ರವಾಗಿ ಸಾರ್ವತ್ರಿಕ ಮನ್ನಣೆ ಪಡೆದಿತ್ತು. ಇದರ ಕೀರ್ತಿ ಗೌರವಗಳೇನಿದ್ದರೂ ಅದರ ಸ್ಥಾಪಕನಾದ ಮಹಾಪ್ರಾಚಾರ್ಯ ಪ್ಲೇಟೋಗೆ ಸಲ್ಲುತ್ತದೆ. ತನ್ನ ಉಳಿದ ಜೀವಮಾನವನ್ನೂ ಶಾಸ್ತ್ರಾಭ್ಯಾಸ, ಗ್ರಂಥ ರಚನೆ ಮತ್ತು ಅಕ್ಯಾಡಮಿಯ ಆಡ

---

* ಅಕ್ಯಾಡಮಿಯ ಮುಖ್ಯದ್ವಾರದ ಮುಂಭಾಗದಲ್ಲಿ ಸಾಕ್ರೆಟೀಸ್‌ನ ಅಚ್ಚುಮೆಚ್ಚಿನ ವಾಕ್ಯವಾದ: "ನಿನ್ನನ್ನು ನೀನು ಅರಿ" (Know Thyself) ಎಂಬ ಫಲಕವನ್ನು ತೂಗು ಹಾಕಲಾಗಿತ್ತು. ಎಂದರೆ ಆತ್ಮವಿದ್ಯೆಗೆ ತುಂಬಾ ಮಹತ್ವಕೊಟ್ಟಿರುವುದು ಗಮನಾರ್ಹ.

ಳಿತ ಇವುಗಳಲ್ಲಿ ಕಳೆದು, ತುಂಬು ಜೀವನ ನಡೆಸಿ, ತನ್ನ ಎಂಬತ್ತೊಂದನೇ ವಯಸ್ಸಿನಲ್ಲಿ ಪ್ಲೇಟೋ ಕಾಲವಾದನು. ಅಕ್ಯಾಡಮಿಯ ಆವರಣದಲ್ಲಿಯೇ ಆತನನ್ನು ಸಮಾಧಿಗೊಳಿಸಲಾಯಿತು.

## ೪. ಪ್ಲೇಟೋನ ಗ್ರಂಥಗಳು

ಐವತ್ತು ಸಂವತ್ಸರಗಳಿಗೂ ಮೆಲ್ಪಟ್ಟು ದೀರ್ಘ ಅವಧಿಯನ್ನು ಕೇವಲ ಚಿಂತನೆ ಹಾಗೂ ಬರಹದಲ್ಲಿ ಪ್ಲೇಟೋ ಕಳೆಯುತ್ತಾನೆ. ಎಂದರೆ ಗ್ರಂಥಗಳ ವಿಪುಲ ಕೃಷಿಯಾಗಿದೆ ಎಂದರ್ಥ. ಒಟ್ಟು ಮೂವತ್ತಾರು ಕೃತಿಗಳು ರಚಿಸಲ್ಪಟ್ಟಿವೆ. ಪ್ರತಿ ನಾಲ್ಕು ಕೃತಿಗಳನ್ನು ಒಂದೊಂದು ಭಾಗದಲ್ಲಿರಿಸಿ, ಅವುಗಳೆಲ್ಲವುಗಳನ್ನೂ ಒಂಬತ್ತು ವಿಭಾಗಗಳಾಗಿ ವಿಂಗಡಿಸಲಾಗಿದೆ. "ಇಥಿಪ್ರೋ", "ಕ್ರಿಟೋ", "ಅಪೋಲಾಜಿ" "ಫಾಯಿಡೋ", "ಫಿಲಿಬಸ್", "ಚಾರ್ ಮಿಡಾಸ್", "ಸಿಂಪೋಸಿಯಂ" "ಪೊಲಿಟಿಕಸ್" ಇತ್ಯಾದಿಯಾಗಿ ಹೆಸರಿಸಬಹುದು. ಪ್ರತಿಯೊಂದು ಕೃತಿಯೂ ಒಂದೊಂದು ನಿರ್ದಿಷ್ಟ ವಿಷಯ ಪ್ರತಿಪಾದನೆಗೆ ಮೀಸಲು. ಹೆಚ್ಚಿನ ಗ್ರಂಥಗಳು ಸೋಕ್ರಟೀಸ್‌ನ ದಿವ್ಯ ಜೀವನ ಮತ್ತು ಸಂದೇಶವನ್ನು ಸಾರುತ್ತವೆ. ಕೃತಿ ರಚನೆಯ ಉದ್ದೇಶ ಗುರುವಿನ ಬೋಧನೆಯನ್ನು ಪ್ರಚುರ ಪಡಿಸಿ ಆತನ ಹೆಸರನ್ನು ಅಮರಗೊಳಿಸುವುದಾಗಿದೆ. ಮತ್ತೆ ಗ್ರಂಥ ರಚನೆಯಲ್ಲಿ ಅನುಸರಿಸಲಾದ

ಕ್ರಮ "ಡಯಲಾಗು" (Dialogue) ಎಂಬುದು. ಡಯಲಾಗು ಎಂದರೆ "ಸಂವಾದ" ಎಂದರ್ಥ. ಇದೊಂದು ವಿಶಿಷ್ಟ ಶೈಲಿ. ಸೋಕ್ರಟೀಸ್ ನಿಂದ ಬಳುವಳಿಯಾಗಿ ಬಂದುದು. ಎಂತಹ ಜಟಿಲ ವಿಷಯವೇ ಇರಲಿ ತರ್ಕಬದ್ಧವಾಗಿ ಸರಳ ಸಂಭಾಷಣಾ ರೂಪದಲ್ಲಿ ವಿವರಿಸುವ ಪದ್ಧತಿಗೆ ಈ ತಂತ್ರ ಬಹಳ ಸಹಾಯಕಾರಿ. ಪರಿಣಾಮಕಾರೀ ವಿಷಯ ಅಭಿವ್ಯಕ್ತಿಗೆ ಪ್ಲೇಟೋ ತನ್ನ ಗ್ರಂಥ ರಚನಾಕ್ರಮವನ್ನಾಗಿ ಈ ತಂತ್ರವನ್ನು ಬಳಸಿಕೊಂಡಿದ್ದಾನೆ. ಇದು ಸಾಹಿತ್ಯದಲ್ಲಿ ಒಂದು ಅಪೂರ್ವ ಪ್ರಯೋಗವೆಂದು ಭಾವಿಸಲಾಗುತ್ತಿದೆ.

ಪ್ಲೇಟೋವಿನಿಂದ ರಚಿತವಾದ ಒಟ್ಟು ಗ್ರಂಥಗಳಲ್ಲಿ ಮೂರು ಗ್ರಂಥಗಳು ಮಾತ್ರ ರತ್ನಪ್ರಾಯವಾಗಿವೆ. ಸರ್ವಕಾಲಕ್ಕೂ ನಿಲ್ಲತಕ್ಕ ಅಪೂರ್ವ ಅನುಕರಣೀಯ ಮೌಲ್ಯ ಅವುಗಳಲ್ಲಿದೆ. ಬಿಸಿರಕ್ತ ಹರಿಯುವ ತಾರುಣ್ಯದಲ್ಲಿ '**ಆದರ್ಶ ರಾಜ್ಯ**' (Republic) ಎಂಬ ಗ್ರಂಥ ಹೊರಬಿತ್ತು. ವಿಷಯ ಪ್ರತಿಪಾದನೆಯಲ್ಲಿ ತಾರುಣ್ಯ ಸಹಜವಾದ ಉತ್ಸಾಹ ಅಥವಾ ಹುಮ್ಮಸು ಹುಚ್ಚು ಹೊಳೆಯಾಗಿ ಹರಿದಿದೆ. ಆ ಮಹಾಪೂರದಲ್ಲಿ ಆದರ್ಶದ ಹೊನಲೇ ನುಗ್ಗಿಬಂದಿದೆ. ವಿಷಯಗಳು ಕಲ್ಪನಾ ವಿಲಾಸದಲ್ಲಿ ಲಾಸ್ಯವಾಡಿವೆ. ಆದರೆ ಯಾವುದೇ ವ್ಯಕ್ತಿ ನಿರಂತರವಾಗಿ ಆದರ್ಶದ ಬೆನ್ನೇರಿ ಭಾವುಕ ಜೀವಿಯಾಗಿ ಉಳಿಯುವುದು ಸಾಧ್ಯವಿಲ್ಲ. ವಯೋಮಾನಕ್ಕನುಗುಣವಾಗಿ ನಿಲುವಿನಲ್ಲಿ ಬದಲಾವಣೆಯಾಗಲೇ ಬೇಕು. ವಯಸ್ಸು ಮಾಗಿದಂತೆ ಭಾವನಾ ಪ್ರವೃತ್ತಿ ಮಾಯವಾಗುತ್ತದೆ. ಅನುಭವ ಆಳವಾಗಿ ಮನಸ್ಸು ಪರಿಪಕ್ವ

ಗೊಳ್ಳುತ್ತದೆ. ಆಗ ಯಥಾರ್ಥಕ್ಕೆ ಪ್ರಾಮುಖ್ಯ ದೊರೆತು ಕಲ್ಪನೆಗೆ ಕಡಿವಾಣ ಹಾಕಲ್ಪಡುವದು. ಇಂತಹ ಬದಲಾವಣೆಯನ್ನು ಪ್ಲೇಟೋನಲ್ಲಿ ಕಾಣುತ್ತೇವೆ. ತಾರುಣ್ಯದಲ್ಲಿ ಭಾವನಾಜೀವಿಯಾದವನು ಇಳಿ ವಯಸ್ಸಿನಲ್ಲಿ ವಾಸ್ತವವಾದಿಯಾಗಿ ಮಾರ್ಪಟ್ಟಿರುವುದನ್ನು ಕಾಣುತ್ತೇವೆ. ತರುವಾಯ ರಚಿಸಿದ ಅವನ ಗ್ರಂಥದಲ್ಲಿ ಈ ವಿಷಯ ಸ್ಪಷ್ಟವಾಗಿ ಗೋಚರಿಸುತ್ತದೆ. ಮಾಗಿದ ವಯಸ್ಸು, ಹದಗೊಂಡ ಮನಸ್ಸಿನ ಸಮ್ಮಿಲನದ ಪ್ರತೀಕವೋ ಎಂಬಂತೆ **"ರಾಜ ನೀತಿ ಪಟು''** (Statesman) ಮತ್ತು **ಶಾಸನಗಳು** (The Laws) ಎಂಬ ಮತ್ತೆರಡು ಗ್ರಂಥಗಳು ಬರೆಯಲ್ಪಟ್ಟವು. ಇವುಗಳಲ್ಲಿ **ರಿಪಬ್ಲಿಕ್** ಬಹಳ ಪ್ರಖ್ಯಾತವಾದುದು. ರಾಜ್ಯಶಾಸ್ತ್ರ ಗ್ರಂಥಗಳಲ್ಲಿಯೇ ಬಹು ಉತ್ಕೃಷ್ಟಗ್ರಂಥ. ಕರ್ತೃವಿನ ಹೆಸರನ್ನು ಅಮರವಾಗಿಸಿದ ನಾಯಕ ಕೃತಿ ಅಥವಾ ಕೌಶಲಪೂರ್ಣ (masterpiece) ಕೃತಿ. ಇದರ ಮೂಲ ಧ್ಯೇಯ, ನ್ಯಾಯ ಪ್ರತಿಪಾದನೆ. ಸಮಾಜದ ಓರೆಕೋರೆಗಳನ್ನು ತಿದ್ದಿ, ಚ್ಯುತಿಇಲ್ಲದೆ. ಸರ್ವಕಾಲಕ್ಕೂ ಉಪಯುಕ್ತವೆನಿಸುವ ಆದರ್ಶ ರಾಜ್ಯವನ್ನು ಚಿತ್ರಿಸುವದು. ಆ ರಾಜ್ಯದಲ್ಲಿಯ ವ್ಯಕ್ತಿ ಮತ್ತು ಸಮಾಜ ಪರಸ್ಪರ ಸಂಬಂಧ, ವಿಕಾಸ, ಪ್ರಭುತ್ವ, ಆಡಳಿತ, ಅಧಿಕಾರ ಇತ್ಯಾದಿ ವಿಷಯಗಳ ಮನೋಜ್ಞ ವಿವರಣೆ ಇಲ್ಲಿದೆ. ಗ್ರಂಥದಲ್ಲಿ ಪ್ರತಿಪಾದಿತ ವಿಷಯಗಳು ಬಹು ಅಮೂಲ್ಯವಾಗಿವೆ. ಎಲ್ಲ ಕಾಲ ದೇಶಗಳಿಗೆ ಉಪಯುಕ್ತವೆನಿಸಿ, ಸಾರ್ವತ್ರಿಕ ಮನ್ನಣೆಗೆ ಪಾತ್ರವಾಗಿವೆ. ಜಿಜ್ಞಾಸುಗಳಿಗೆ ಬೌದ್ಧಿಕ ಶಿಸ್ತನ್ನು ಕೊಡುವ ಶಕ್ತಿ ವಿಶೇಷ ಆ ಗ್ರಂಥಕ್ಕಿದೆ. ತತ್ವಾಭ್ಯಾಸಿಗಳಿಗಂತೂ

ನಿರಂತರ ಸ್ಫೂರ್ತಿಯನ್ನೀಯುತ್ತಲೇ ಇದೆ. ಹಾಗೆಂದೇ ಪ್ಲೇಟೋವಿನ "ರಿಪಬ್ಲಿಕ್" ಪ್ರಪಂಚದ ಅತ್ಯುತ್ತಮ ಗ್ರಂಥಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ.

## ೫. ಪ್ಲೆಟೋ ಹಿರಿಮೆ

ಈ ಮೊದಲು ತಿಳಿಸಿದಂತೆ ಪ್ಲೆಟೋ ಮಹಾ ಮೇಧಾವಿ. ಅಪ್ರತಿಮ ಪ್ರತಿಭಾಶಾಲಿ. ಅಲ್ಲದೆ ಅದ್ವಿತೀಯ ತಾರ್ಕಿಕನೂ, ಅನುಪಮ ಆಧ್ಯಾತ್ಮವಾದಿಯೂ, ಅಸಾಧಾರಣ ನೀತಿ ಸಿದ್ಧಾಂತಿಯೂ ಆಗಿದ್ದನು, ಜೊತೆಗೆ ವಿವೇಚನೆ, ಚಿಂತನೆ ಮತ್ತು ವಿಮರ್ಶೆಗಳ ಅಸಾಧಾರಣ ಶಕ್ತಿಯನ್ನು ಸೋಕ್ರೆಟೀಸ್‌ನಿಂದ ಬಳುವಳಿಯಾಗಿ ಪಡೆದನು. ಹಲವು ವಿಷಯಗಳಲ್ಲಿ ಗುರುವಿನ ಪಥವನ್ನು ಅನುಕರಣ ಮಾಡಿರುವುದು ಸ್ಪಷ್ಟ. ಗುರುವಿನ ವ್ಯಕ್ತಿತ್ವದ ಪ್ರಭಾವ ಅವನ ಮೇಲೆ ಆಳವಾಗಿ ಅಚ್ಚೊತ್ತಿದಂತಿತ್ತು ಎಂಬುದಕ್ಕೆ ಅವನು ವಿಚಾರ ಸ್ವಾತಂತ್ರ್ಯಕ್ಕೆ ಕೊಡುವ ಪ್ರಾಧಾನ್ಯ ಮತ್ತು ಸತ್ಯಾನ್ವೇಷಣೆಯಲ್ಲಿ ಅನುಸರಿಸುವ ವೈಜ್ಞಾನಿಕ ದೃಷ್ಟಿ ಇವೇ ಸಾಕ್ಷಿ. ಅಲ್ಲದೇ ವಿಷಯ ಪ್ರತಿಪಾದಿಸುವಾಗ ಹೆಜ್ಜೆ ಹೆಜ್ಜೆಗೆ ನೈತಿಕ ಮೌಲ್ಯಕ್ಕೆ ಜೋತು ಬೀಳುವುದನ್ನು ನೋಡಿದರೆ ಗುರುವಿನ ಪ್ರಭಾವ ಶಿಷ್ಯನ ಮೇಲೆ ಅಪಾರವಾಗಿತ್ತು. ಎಂಬುದು ಇನ್ನೂ ಸ್ಪಷ್ಟ. ಅದೇನೇ ಇರಲಿ, ತಾತ್ವಿಕ ಪ್ರಪಂಚದಲ್ಲಿ ಪ್ಲೆಟೋ ಅತಿ ಉನ್ನತ ಸ್ಥಾನವನ್ನು ಅಲಂಕರಿಸುತ್ತಾನೆ. ಇವನ ವಿಚಾರಗಳನ್ನು ಮೆಚ್ಚದವರೇ

ಇಲ್ಲ. ಅನೇಕ ತತ್ವಜ್ಞಾನಿಗಳು ಇವನ ವಿಚಾರಗಳನ್ನು ಅನುಕರಣ ಮಾಡಿದ್ದಾರೆ. ಥಾಮಸ್ ಆಕ್ವಿನಾಸ್, ಸೆಯಿಂಟ್ ಅಗಸ್ಟೀನ್.ಶಲ್ಲಿ, ಕಾರ್ಲಮಾರ್ಕ್ಸ ಮತ್ತಿತರರು ಇವನ ಬರಹದಿಂದ ಸ್ಫೂರ್ತಿ ಪಡೆದಿದ್ದಾರೆ. ವ್ಹೈಟ್‌ಹೆಡ್‌ರವರ ಮಾತಿನಲ್ಲಿಹೇಳುವುದಾದರೆ:''ಪಾಶ್ಚಿಮಾತ್ಯ ತತ್ವಶಾಸ್ತ್ರ ಕ್ರಮಿಸಿರುವ ಹಾದಿ ಎಲ್ಲವೂ ಪ್ಲೇಟೋವಿನ ಮೂಲ ವಿಚಾರಧಾರೆಗಳಿಗೆ "ಅಡಿಟಿಪ್ಪಣೆ" (foot note) ಇದ್ದ ಹಾಗೆ ಎಂದಿದ್ದಾರೆ. ಎಂದರೆ, ಪಾಶ್ಚಿಮಾತ್ಯ ತತ್ವಶಾಸ್ತ್ರ ಬೆಳವಣಿಗೆಯಲ್ಲಿ ಹೊಸತೆಂಬುದೇ ಇಲ್ಲ. ಮೂಲ ಪ್ಲೇಟೋವಿನದು. ಹಾಗೆ ಒಂದು ಪಕ್ಷ ಇದ್ದರೂ ಅಲ್ಲಲ್ಲಿ ಕೊಂಚ ಮಾರ್ಪಾಟು. ಅಷ್ಟೆ ಅವನ ವಿಚಾರಗಳು ಅಷ್ಟೊಂದು ಅಪ್ಪಟ ಸ್ವತಂತ್ರವಾದವುಗಳು. ಅವು ಎಷ್ಟು ಆಳವೋ ಅಷ್ಟೇ ಮೂಲಭೂತ (Original) ವಾದವುಗಳೆಂಬುದು ಸ್ಪಷ್ಟ. ಇದನ್ನು ವಿವರಿಸಲು ಬೇರೆ ನಿದರ್ಶನ ಬೇಕಿಲ್ಲ. ಪ್ಲೇಟೋ ಸ್ವಂತಿಕೆಯಿಂದ ಮೆರೆದಿದ್ದಾನೆ. ಸಾವಿರ ಸಾವಿರ ವರ್ಷ ಪರ್ಯಂತ ನಿಲ್ಲಬಲ್ಲ ವೈಜ್ಞಾನಿಕ ದೃಷ್ಟಿ ಮತ್ತು ಅದಕ್ಕನುಗುಣವಾದ ತಾತ್ವಿಕ ಸೃಷ್ಟಿ ಅವನದು.

## ೬. ಗ್ರಂಥ ರಚನೆಯ ಹಿನ್ನೆಲೆ

ಮನುಷ್ಯ ಪರಿಸರದ ಶಿಶು. ತನ್ನ ಸುತ್ತ ಮುತ್ತಲ ಪರಿಸರದಿಂದ ಪ್ರಭಾವಿತವಾಗದಿರಲಾರ. ತಜ್ಞರ ವಿಷಯದಲ್ಲೂ ಅಷ್ಟೆ. ಸಾಮಾನ್ಯವಾಗಿ ತಮ್ಮ ಸಮಕಾಲೀನ ಯುಗಧರ್ಮ

ವನ್ನು ಸಿದ್ಧಾಂತಗಳಲ್ಲಿ ಪ್ರತಿಬಿಂಬಿಸದಿರಲಾರರು. ತಮ್ಮ ಕಾಲದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿ ಗಳನ್ನೂ ನಾವು "ಸನ್ನಿವೇಶ" ವೆಂದು ಪರಿಗಣಿಸುವದಾದರೆ, ಅಂತಹ ಸನ್ನಿವೇಶವನ್ನು ಸಮರ್ಥಿಸಿಯೋ ಅಥವಾ ಖಂಡಿ ಸಿಯೋ ತಜ್ಞರು ತಮ್ಮ ಗ್ರಂಥಗಳನ್ನು ರಚಿಸುತ್ತಾರೆ. ಕೆಲ ವ್ರೇಮ್ಮೆ ಸನ್ನಿವೇಶದ ಮಹತ್ವ ಮತ್ತು ತತ್ವಜ್ಞಾನಿಯ ಪ್ರತಿಭೆ ಇವುಗಳ ಸಮ್ಮಿಲನದಿಂದ ಸರ್ವೋತ್ಕೃಷ್ಟವಾದ ಸತ್ಯಾಂಶಗಳು ಸಿದ್ಧಾಂತ ರೂಪದಲ್ಲಿ ಹೊರಬೀಳುತ್ತವೆ. ಇವುಗಳು ಸರ್ವಾದರ ಣೀಯವಾದವುಗಳು. ಕಾಲದೇಶ ಭೇದವಿಲ್ಲದೇ ಸರ್ವಕಾಲಕ್ಕೂ ಉಪಯುಕ್ತವಾದವುಗಳೆಂದು ಪರಿಗಣಿಸಲ್ಪಡುತ್ತವೆ. ಪ್ಲೇಟೋ ನಿನ "ರಿಪಬ್ಲಿಕ್" ಇದಕ್ಕೆ ಹೊರತಾಗಿಲ್ಲ. ಗ್ರಂಥ ಸೃಷ್ಟಿಗೆ ಅಂದಿನ ಸನ್ನಿವೇಶವೇ ಕಾರಣ.

ಕೆಲವು ತಜ್ಞರು ತಮ್ಮ ಸಮಕಾಲೀನ ರಾಜಕೀಯ ಪರಿ ಸ್ಥಿತಿಯನ್ನು ಹಿನ್ನೆಲೆಯಾಗಿಟ್ಟು, ಬದಲಾವಣೆಯನ್ನು ಬೆಂಬಲಿ ಸದೇ,ಯಥಾಸ್ಥಿತಿಯನ್ನು ಸಮರ್ಥಿಸುವ ಸಲುವಾಗಿ ಸಿದ್ಧಾಂತ ಗಳನ್ನು ಪ್ರತಿಪಾದಿಸುವರು. ಇಂಗ್ಲೆಂಡಿನಲ್ಲಿ ಸ್ಟೂವರ್ಟ್ ಸಂತ ತಿಯ ಅರಸರ ನಿರಂಕುಶ ಪ್ರಭುತ್ವವನ್ನು ಸಮರ್ಥಿಸಲು ಹಾಬ್ಸ್ ಮಹಾಶಯ "ಲೆವಿಯಾತನ್" ಎಂಬ ಗ್ರಂಥ ರಚಿ ಸಿದ. ತರುವಾಯ ಪಾರ್ಲಿಮೆಂಟರೀ ಪ್ರಜಾಸತ್ತೆಯ ಮೇಲ್ಮೈ ಯನ್ನು ಎತ್ತಿ ಹಿಡಿಯಲು ಲಾಕ್ ಮಹಾನುಭಾವ "ದಿ ಟ್ರೀ ಟೈಸ್ ಆನ್ ಸಿವಿಲ್ ಗಾರ್‍ನಮೆಂಟ್" ಎಂಬ ಹೊತ್ತಿಗೆ ಬರೆದ.

ಹಾಗೆ ಮಧ್ಯಯುಗದಲ್ಲಿ ಇಟಲಿಯ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿ ದುರ್ಬಲಗೊಂಡುದನ್ನು ಟೀಕಿಸುವ ಸಲುವಾಗಿ "ದಿ ಪ್ರಿನ್ಸ್" ಎಂಬ ಲೋಕೋತ್ತರ ಗ್ರಂಥವನ್ನು ಮೆಕಿಯಾದಲ್ಲಿ ರಚಿಸಿದ. ಅದೇ ತೆರನಾಗಿ ಗ್ರೀಸ್ ದೇಶದ ಸಾಮಾಜಿಕ ಸ್ಥಿತಿಗತಿಗಳು ಹದಗೆಟ್ಟಿದ್ದನ್ನು ನೋಡಿ, ಅದನ್ನೂ ಖಂಡಿಸುವ ಸಲುವಾಗಿ"ಪ್ಲೇಟೋ ರಿಪಬ್ಲಿಕ್" ಗ್ರಂಥ ರಚಿಸಿರುವುದು ಅಪೂರ್ವವಲ್ಲ.

ಹಾಗಾದರೆ ಸಮಕಾಲೀನ ಗ್ರೀಸ್ ದೇಶದ ಹಿನ್ನೆಲೆ ಏನು ? ಗ್ರಂಥ ರಚಿಸುವಲ್ಲಿ ಯಾವ ವಿಷಯಗಳು ಪ್ರಚೋದನೆ ನೀಡಿದವು ? ಆದರ್ಶ ರಾಜ್ಯ ಅಥವಾ ಸುಖೀ ರಾಜ್ಯ ಸ್ಥಾಪನೆ ಹೇಗಾದರೆ ಸಾಧ್ಯ ? ಅದರ ಇತಿ ಮಿತಿಗಳೇನು ? ಇತ್ಯಾದಿ ಹಲವು ಮಹತ್ವದ ವಿಷಯಗಳನ್ನು ತಿಳಿದುಕೊಳ್ಳುವುದು ಅವಶ್ಯ.

ಪ್ರಾರಂಭದಲ್ಲಿ ಕ್ರಿ. ಪೂ. 900 ರ ಸುಮಾರಿಗೆ ಗ್ರೀಸ್ ದೇಶದ ನಗರ-ರಾಜ್ಯ(City-state) ಗಳಲ್ಲಿ "ರಾಜಪ್ರಭುತ್ವ" (Monarchy) ಆಚರಣೆಯಲ್ಲಿತ್ತು. ರಾಜನೇ ಸರ್ವಸ್ವ. ಅಧಿಕಾರಗಳೆಲ್ಲ ಅವನಲ್ಲೇ ಕೇಂದ್ರಿಕೃತ. ಹಾಗಿದ್ದರೂ ಪೌರ್ವಾತ್ಯ ದೇಶಗಳ ದೊರೆಗಳಂತೆ ಯಾವ ವಿಶೇಷವಾದ ಅಧಿಕಾರ, ಅಂತಸ್ತು, ದರ್ಪಗಳು ಅವರಲ್ಲಿರಲಿಲ್ಲ. ಕಾನೂನುಗಳಿಗೆ ರಾಜರು ವಿಧೇಯರಾಗಿ ವರ್ತಿಸುತ್ತಿದ್ದರು. ಕಾಲಕ್ರಮದಲ್ಲಿ ಈ ಪದ್ಧತಿಯ ಸರಕಾರ ಸತ್ವಹೀನವಾಯಿತು. ಪ್ರಜೆಗಳ ಆಶೋತ್ತರಗಳನ್ನು ಈಡೇರಿಸಲು ಅಸಮರ್ಥವಾಯಿತು. ಕ್ರಿ. ಪೂ ೮ ನೇ ಶತಮಾನದ ಅಂತ್ಯಕ್ಕೆ ಸ್ಪಾರ್ಟಾ ರಾಜ್ಯ ಒಂದನ್ನುಳಿ

ಎಲ್ಲ ರಾಜ್ಯಗಳಲ್ಲಿ ರಾಜಪ್ರಭುತ್ವ ಕೊನೆಗೊಂಡಿತು. ತರುವಾಯ ಪ್ರಭಾವಶಾಲಿಗಳಾದ ಕೆಲವು ಶ್ರೀಮಂತರು ಅಧಿಕಾರ ಗ್ರಹಣ ಮಾಡಿದರು. ಇವರ ಆಳ್ವಿಕೆಯನ್ನು "ಶ್ರೀಮಂತ "ಪ್ರಭುತ್ವ" (Aristocracy) ಎಂದು ಕರೆಯಿತು. ಕೆಲವುಕಾಲ ಈ ಆಳ್ವಿಕೆ ಜನರಿಗೆ ಸಹ್ಯವಾಗಿತ್ತು. ಜೀವನದ ಎಲ್ಲ ಕ್ಷೇತ್ರಗಳಲ್ಲಿ ಅಪೂರ್ವ ಪ್ರಗತಿಯನ್ನು ಸಾಧಿಸಲಾಯಿತು. ಆದರೆ ಈ ಪರಿಸ್ಥಿತಿ ಬಹುಕಾಲ ಮುಂದುವರಿಯಲಿಲ್ಲ. ಪರ್ತಿಶ್ವೀ ಶ್ರೀಮಂತರು ಸ್ವಾರ್ಥಲಾಲಸೆಯಿಂದ ಪ್ರೇರಿತರಾಗಿ ಅಧಿಕಾರ ದುರುಪಯೋಗ ಮಾಡಿದರು. ಕಾನೂನು ಧಿಕ್ಕರಿಸಲ್ಪಟ್ಟು ಬಡವರ ಶೋಷಣೆಯಾಯಿತು. ಜನರು ನಿರಾಶೆಗೊಂಡು ಈ ಪದ್ಧತಿಯ ಸರ್ಕಾರವನ್ನು ಉಚ್ಚಾಟಿಸಿದರು. ಅದೇ ಜಾಗದಲ್ಲಿ ಶ್ರೀಮಂತ ಪ್ರಭುತ್ವದ "ವಿಕೃತರೂಪ" (perverted form of government) ದ ಇನ್ನೊಂದು ಪದ್ಧತಿ ಸರ್ಕಾರವನ್ನು ಅನುಷ್ಠಾನಕ್ಕೆ ತಂದರು. ಇದನ್ನು "ಸ್ವಲ್ಪಜನಾದಿಪತ್ಯ" (Oligarchy) ವೆಂದು ಕರೆಯಲಾಯಿತು. ಕ್ರಮೇಣ ಶ್ರೀಮಂತ ಪ್ರಭುತ್ವಕ್ಕಾದ ಗತಿಯೇ ಇದಕ್ಕೂ ಆಯಿತು. ತರುವಾಯ ಕ್ರಿ. ಪೂ. 600 ರ ಸುಮಾರಿಗೆ ಬಹುತೇಕ ರಾಜ್ಯಗಳಲ್ಲಿ ನಿರಂಕುಶಾಧಿಕಾರಿಗಳು (tyrents) ರಾಜ್ಯಸೂತ್ರಗಳನ್ನು ವಹಿಸಿಕೊಂಡರು. ಇವರು ಪ್ರಜೆಗಳಿಗಾಗಲೀ, ಕಾನೂನುಗಳಿಗಾಗಲೀ ತಲೆಬಾಗಬೇಕಿರಲಿಲ್ಲ. ಸರ್ವ ಅಧಿಕಾರಗಳನ್ನು ಸನ್ನಿವೇಶ ಬಲದಿಂದ ಗ್ರಹಣಮಾಡಿ ದರ್ಪದಿಂದ ಆಳ್ವಿಕೆ ನಡೆಸಿದರು. ಇಂಥವರ ಆಳಿಕೆಯನ್ನೂ "ನಿರಂಕುಶ ಪ್ರಭುತ್ವ"(Tyranny)ವೆಂದು ಕರೆಯಲಾಯಿತು. ಈ ನಿರಂಕುಶ ಪ್ರಭುಗಳು ಬಲಪ್ರಯೋಗ ಅಥವಾ

ಕುತಂತ್ರದಿಂದ ಅಧಿಕಾರ ಗ್ರಹಣಮಾಡಿದರೂ ಸದಾ ಜನಹಿತ ಸಾಧನೆಗಾಗಿ ಶ್ರಮಿಸಿದರು. ಆದಾಗ್ಯೂ ಕಾಲಾಂತರದಲ್ಲಿ ಈ ಪ್ರಭುತ್ವವೂ ಜನರಿಗೆ ಸಹ್ಯವಾಗಲಿಲ್ಲ. ಅಧಿಕಾರ ದುರುಪಯೋಗವಾಗಿ ಕಾನೂನುಗಳು ಗಾಳಿಗೆ ತೂರಲ್ಪಟ್ಟವು. ವ್ಯಕ್ತಿ ಸ್ವಾತಂತ್ರ್ಯ ಧಿಕ್ಕರಿಸಲ್ಪಟ್ಟಿತು. ಯಾವುದೇ ಪದ್ಧತಿಯ ಸರ್ಕಾರ ತನ್ನ ಅಂತಃಸತ್ವವನ್ನು ಕಳೆದುಕೊಂಡರೆ ಸಹಜವಾಗಿ ದುರ್ಬಲಗೊಳುತ್ತದೆ. ನಿರಂಕುಶ ಪ್ರಭುತ್ವಕ್ಕೂ ಇದೇ ಗತಿಯಾಯಿತು. ಜನರು ದಂಗೆ ಎದ್ದು ಅಂತಹ ಪ್ರಭುತ್ವವನ್ನೂ ಉಚ್ಚಾಟಿಸಿದರು. ಕೊನೆಯಲ್ಲಿ ವ್ಯಕ್ತಿಯ ಆಶೋತ್ತರಗಳನ್ನು ಪರಿಣಾಮಕಾರಿಯಾಗಿ ಈಡೇರಿಸ ಬಲ್ಲ ಪ್ರತ್ಯಕ್ಷ ಪ್ರಜಾಪ್ರಭುತ್ವವನ್ನು ಅನುಷ್ಠಾನಕ್ಕೆ ತರಲಾಯಿತು. ಪೆರಿಕ್ಲಸ್‌ನ ಆಳ್ವಿಕೆಯಲ್ಲಿ ಇದರ ಯಶಸ್ವೀ ಕಾರ್ಯಾಚರಣೆಯಾಯಿತು. ವ್ಯಕ್ತಿ ಸ್ವಾತಂತ್ರ್ಯ, ಸಮಾನತೆ, ನ್ಯಾಯ ಮುಂತಾದ ಮೌಲ್ಯಗಳನ್ನು ಎತ್ತಿ ಹಿಡಿಯಲಾಯಿತು. ಪ್ರಜೆಗಳ ವ್ಯಕ್ತಿತ್ವ ಉಜ್ವಲಗೊಂಡಿತು. ಪೆರಿಕ್ಲಸ್‌ನ ಆಳ್ವಿಕೆಯ ಕಾಲವನ್ನು ಸುವರ್ಣಯುಗವೆಂದು ಕರೆಯಲಾಯಿತು. ಅಥೆನ್ಸ್ ರಾಜ್ಯ ಪ್ರಜಾಪ್ರಭುತ್ವದ ನೇತಾರ ರಾಜ್ಯವಾಗಿ ತನ್ನ ಧವಳ ಕೀರ್ತಿಯನ್ನು ಎಲ್ಲೆಡೆ ಪಸರಿಸಿತು. ಸಾಹಿತ್ಯ, ತತ್ವಶಾಸ್ತ್ರ, ರಾಜ್ಯ ಶಾಸ್ತ್ರ, ಕಲೆ, ವಾಸ್ತು ಶಿಲ್ಪ ಇತ್ಯಾದಿಗಳಿಗೆ ಅಸ್ತಿಭಾರ ಹಾಕಲ್ಪಟ್ಟಿತು. ಮುಂದಿನ ಸಹಸ್ರ, ಸಹಸ್ರ ವರ್ಷಗಳ ತಲೆಮಾರಿನ ಜನತೆಗೆ ಗ್ರೀಕ್ ಸಂಸ್ಕೃತಿ ಆದರ್ಶಪ್ರಾಯವಾಗಿ ಪರಿಣಮಿಸಿತು.

# ೭. ರಾಜಕೀಯ ಪ್ರಯೋಗ

ಹೀಗೆ ಪ್ರಾಚೀನ ಗ್ರೀಸ್ ವಿವಿಧ ಪದ್ಧತಿಯ ಸರ್ಕಾರ ಗಳನ್ನು ಕಾಲಕಾಲಕ್ಕೆ ಅನುಷ್ಠಾನಕ್ಕೆ ತಂದಿತು. ಒಂದು ಪದ್ಧತಿಯ ಸರಕಾರವಾದ ಮೇಲೆ ಮತ್ತೊಂದು ಪದ್ಧತಿಯ ಸರಕಾರವನ್ನು ಆಚರಣೆಗೆ ತರಲಾಗುತಿತ್ತು. ಭಿನ್ನ ಭಿನ್ನ ಪದ್ಧತಿ ಸರಕಾರಗಳು ಆಗಾಗ ಅಸ್ತಿತ್ವಕ್ಕೆ ಬಂದು ಮತ್ತೆ ಮರೆಯಾಗುತ್ತಿದ್ದವು. ಯಾವುದೋ ಒಂದು ಪದ್ಧತಿ ಸರಕಾರ ಜನರ ಆಶೋತ್ತರಗಳನ್ನು ಈಡೇರಿಸುವಲ್ಲಿ ಅಸಮರ್ಥವಾದಾಗ ಮತ್ತೊಂದು ಪದ್ಧತಿ ಸರಕಾರ ತಲೆ ಎತ್ತುತಿತ್ತು. ಒಂದು ಪ್ರಭುತ್ವ ಪದ್ಧತಿ ಅಳಿದ ಮೇಲೆ ಮತ್ತೊಂದು ಪ್ರಭುತ್ವ ಪದ್ಧತಿ ಅಸ್ತಿತ್ವದಲ್ಲಿ ಬರುತ್ತಿತ್ತು. ರಾಜ ಪ್ರಭುತ್ವ, ಶ್ರೀಮಂತ ಪ್ರಭುತ್ವ ಹಾಗು ಪ್ರಜಾ ಪ್ರಭುತ್ವ ಇವು ಅನುಕ್ರಮವಾಗಿ ಬರುವ "ಕ್ರಮಬದ್ಧ" ಸರಕಾರದ ಪದ್ಧತಿಗಳು. ರಾಜ್ಯದ ಕಾಯಿದೆ ಉಲ್ಲಂಘೀಸಲ್ಪಟ್ಟು, ಅಧಿಕಾರ ದುರುಪಯೋಗವಾಗಿ, ಆಡಳಿತ ದುರ್ಬಲಗೊಂಡಾಗ ಸಹಜವಾಗಿ ಮೇಲೆ ವಿವರಿಸಿದ ಮೂರು ಪದ್ಧತಿ ಸರಕಾರಗಳು 'ವಿಕೃತರೂಪ' (Perverted form of governments) ತಾಳುತ್ತಿದ್ದವು. ಅಂದರೆ "ರಾಜತ್ವ" ಹೋಗಿ "ಏಕನಾಯಕ ಪ್ರಭುತ್ವ" (Tyranny), ಶ್ರೀಮಂತರ ಪ್ರಭುತ್ವ ತೊಲಗಿ 'ಸ್ವಲ್ಪ ಜನಾದಿಪತ್ಯ' (Oligarchy), ಮತ್ತೆ ಪ್ರಜಾಪ್ರಭುತ್ವ, ತಪ

ನಂತರ "ಬಹುನಾಯಕ ಪ್ರಭುತ್ವ" (ಆಕ್ಸಾಕ್ರಸಿ) ಗಳಾಗಿ ಪರಿವರ್ತನೆಗೊಳ್ಳುತ್ತಿದ್ದುವು. ಅಂತೂ ಯಾವುದೋ ಒಂದು ಪದ್ಧತಿ ಸರಕಾರ ಸತ್ವಹೀನವಾಗಿ ಪತನವಾದಾಗ ಆದರಸ್ಥಳದಲ್ಲಿ ಮತ್ತೊಂದು ಪದ್ಧತಿ ಸರಕಾರ ತಲೆ ಎತ್ತುತ್ತಿತ್ತು. ಈ ರೀತಿಯ ಸರಕಾರ ಪದ್ಧತಿಗಳು ಬದಲಾಗುವುದನ್ನು "ಸರಕಾರಗಳ ಪರಿವರ್ತನೆಯ ಆವೃತ್ತ ಕ್ರಮ" (Cyclical change of Governments) ಎಂದು ಕರೆಯಲಾಗುತ್ತದೆ. ಗ್ರೀಕ್ ನಗರ-ರಾಜ್ಯಗಳಲ್ಲಿ ಈ ರೀತಿ ಸರಕಾರಗಳು ಆಗಿಂದಾಗ ಬದಲಾಗುತ್ತಿದ್ದುದು ಸರ್ವೇಸಾಮಾನ್ಯವಾಗಿತ್ತು. ಪ್ರಸಿದ್ಧ ಇತಿಹಾಸಕಾರರಾದ ಪೋಲಿಬಿಯಸ್ ಮತ್ತು ತುಸಿಡಸ್ ಎಂಬುವರು ಈ ವಿಷಯ ದೃಢೀಕರಿಸುತ್ತಾರೆ. ಯಾವುದೇ ಪದ್ಧತಿ ಸರಕಾರವನ್ನು ಅನುಷ್ಠಾನಕ್ಕೆ ತಂದರೂ ಆ ಸರಕಾರದ ಗುಣ ದೋಷ ಅಥವಾ ತಪ್ಪು-ಒಪ್ಪುಗಳ ವಿಮರ್ಶೆ ಸಾರ್ವಜನಿಕವಾಗಿ ಜರುಗುತಿತ್ತು. ಹೀಗೆ, ಪ್ರಾಚೀನ ಗ್ರೀಸ್ ವಿವಿಧ ಪ್ರಯೋಗಗಳನ್ನು ಮಾಡುವ ಒಂದು ಅಪೂರ್ವ ರಾಜಕೀಯ "ಪ್ರಯೋಗ ಶಾಲೆ" ಯಾಗಿತ್ತೆಂದರೆ ತಪ್ಪಾಗಲಾರದು.

ಮೇಲೆ ವಿವರಿಸಿದಂತೆ ಸರಕಾರಗಳ ಉತ್ಕರ್ಷ ಅವನತಿ. ಅಥವಾ ಏಳು-ಬೀಳುಗಳ ಬಗೆಗೆ ಪ್ಲೇಟೋ ಗಮನಾರ್ಹವಾದ ಒಂದು ವಿಷಯ ಸೂಚಿಸುತ್ತಾನೆ. ಅದೇನೆಂದರೆ, ಪ್ರತಿಯೊಂದು ಪದ್ಧತಿ ಸರಕಾರವೂ ಹಲವು

ನಿರ್ದಿಷ್ಟ ತತ್ವಗಳ ಆಧಾರದ ಮೇಲೆ ಅಸ್ತಿತ್ವಕ್ಕೆ ಬರುತ್ತದೆಂದೂ, ಆ ನಿರ್ದಿಷ್ಟ ತತ್ವದ ಅತಿರೇಕದ ಅನುಷ್ಠಾನದಿಂದಲೇ ಅದು ಪತನ ಹೊಂದುತ್ತದೆಂದೂ ಪ್ಲೇಟೋ ತೋರಿಸಿಕೊಟ್ಟನು. ಒಂದು ಚಿಕ್ಕ ನಿದರ್ಶನದ ಮೂಲಕ ನಾವು ಇದನ್ನು ಸ್ಪಷ್ಟೀಕರಿಸಬಹುದು. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ನ್ಯಾಯ ಇತ್ಯಾದಿ ಮೌಲ್ಯಗಳ ಆಧಾರದ ಮೇಲೆ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬರುತ್ತದೆ. ಆದರೆ ಪ್ರಜೆಗಳು ಅಂತಹ ಮೌಲ್ಯಗಳ ಬಗ್ಗೆ ವಿಶೇಷ ಹಂಬಲ ಉಳ್ಳವರಾಗುತ್ತಾರೆ. ಆಗ ಸಹಜವಾಗಿ ಅವುಗಳ ಅತಿರೇಕದ ಅನುಷ್ಠಾನಕ್ಕೆ ಪ್ರಯತ್ನ ಪಟ್ಟಾಗ ಸರ್ಕಾರ ದುರ್ಬಲಗೊಂಡು ಪತನವಾಗುವುದು ನಿಶ್ಚಿತ. ಸ್ವತಂತ್ರ ಭಾರತದಲ್ಲಿ ಸ್ವಾತಂತ್ರ್ಯ ಸಮಾನತೆಗಳೆಂಬ ಮೌಲ್ಯಗಳು ಅತಿಯಾಗಿ ದುರುಪಯೋಗವಾಗುತ್ತಿವೆ. ಅವುಗಳ ಬಗ್ಗೆ ಪ್ರಜೆಗಳು ವಿಶೇಷ ಹಂಬಲವುಳ್ಳವರಾಗಿದ್ದಾರೆ. ಹೀಗಾಗಿ ಪ್ರಜಾಪ್ರಭುತ್ವದ ಯಶಸ್ವೀ ಕಾರ್ಯಾಚರಣೆ ಸಾಧ್ಯವಾಗುತ್ತಿಲ್ಲ. ಪ್ರಜಾಪ್ರಭುತ್ವ ಮುಗ್ಗರಿಸುತ್ತಿದೆ. ಆಧುನಿಕ ರಾಷ್ಟ್ರಗಳು ಇದೇ ತಪ್ಪನ್ನೇ ಮಾಡುತ್ತಿವೆ. ಅದರಲ್ಲೂ ಏಷ್ಯಾ ಮತ್ತು ಆಫ್ರಿಕಾ ರಾಷ್ಟ್ರಗಳಲ್ಲಿ ಪ್ರಜಾ ಪ್ರಭುತ್ವ ಉಚ್ಚಾಟಿಸಲ್ಪಡುತ್ತಿದೆ. ಅದರ ಸ್ಥಳದಲ್ಲಿ ನಿರಂಕುಶ ಪ್ರಭುತ್ವ ತಲೆ ಎತ್ತುತ್ತಿದೆ. ಈ ಸನ್ನಿವೇಶವನ್ನು ಗಮನಿಸಿದರೆ ಪ್ಲೇಟೋ ಸೂಚಿಸಿದ ಸೂತ್ರದ ಮಹತ್ವ ಮನಗಾಣದೇ ಇರದು.

ಒಟ್ಟಾರೆ, ಪ್ರಾಚೀನ ಗ್ರೀಕರು ಸೂಕ್ಷ್ಮ ಬುದ್ಧಿಯವರೂ, ಸ್ವತಂತ್ರ ವಿಚಾರ ಶೀಲರೂ ಆಗಿದ್ದರು. ಅವರ ರಾಜಕೀಯ ಪ್ರಜ್ಞೆ ಮೇಲ್ಮಟ್ಟದ್ದಾಗಿತ್ತು. ಸಮಕಾಲೀನ ಸರಕಾರಗಳು ಮತ್ತು ಅವುಗಳ ಕಾರ್ಯಾಚರಣೆಯಲ್ಲಿಯ ಲೋಪ ದೋಷಗಳನ್ನು ಕೂಲಂಕುಷವಾಗಿ ವಿಮರ್ಶಿಮಾಡಲು ಸಮರ್ಥರಾಗಿದ್ದರು. ಆ ಬಗ್ಗೆ ಸಾರ್ವಜನಿಕವಾಗಿ ಚರ್ಚೆಗಳನ್ನು ಆಗಾಗ್ಗೆ ಸಂಘಟಿಸಲಾಗುತ್ತಿತ್ತು. ಎಲ್ಲವನ್ನೂ ವಿಚಾರದ ಒರೆಗಲ್ಲಿಗೆ ಹಚ್ಚಿ, ಉಪಯುಕ್ತವಾದುದನ್ನು ಮಾತ್ರ ಸ್ವೀಕರಿಸಲಾಗುತ್ತಿತ್ತು. ಸರ್ಕಾರಗಳು ಹೇಗೆ ಮತ್ತು ಏಕೆ ಸತ್ವಹೀನವಾಗುತ್ತವೆ ? ಜನಹಿತವನ್ನು ಸಾಧಿಸುವಲ್ಲಿ ಸರ್ಕಾರಗಳು ಏಕೆ ವಿಫಲವಾಗುತ್ತವೆ ? ಯಾವ ಪದ್ಧತಿ ಸರ್ಕಾರ ಉಪಯುಕ್ತವಾದದ್ದು ? ಯಾವುದು ನಿರುಪಯುಕ್ತವಾದುದು ? ಇತ್ಯಾದಿ ನಿಗೂಢ ವಿಷಯಗಳಲ್ಲಿ ಗ್ರೀಕರು ಜಿಜ್ಞಾಸುಗಳಾಗಿದ್ದರು.

## ೮. ಅಥೆನ್ಸ್ ಪತನ

ಪ್ರತ್ಯಕ್ಷ ಪ್ರಜಾಪ್ರಭುತ್ವವನ್ನು ಯಶಸ್ವೀ ಕಾರ್ಯಾಚರಣೆ ಮಾಡಿದ ಕೀರ್ತಿ ಅಥೆನ್ಸ್ ರಾಜ್ಯಕ್ಕೆ ಸಲ್ಲುತ್ತದೆ. ಅತಿ ವೈಭವಶಾಲಿಯಾಗಿ ಮೆರೆದ ರಾಜ್ಯವಾಗಿತ್ತು. ಜೀವನದ ವಿವಿಧ ಕ್ಷೇತ್ರಗಳಲ್ಲಿ ಅಗಾಧ ಪ್ರಗತಿ ಸಾಧಿಸಲಾಗಿತ್ತು. ಆ ದೇಶದ

ಇತಿಹಾಸದಲ್ಲಿ ಐದನೇ ಶತಮಾನ ಬಹು ವಿಶಿಷ್ಟ ಪೂರ್ಣವಾದುದು ಇದನ್ನು ಸುವರ್ಣಯುಗವೆಂದು ಕರೆಯಲಾಯಿತು. ಈ ಅವಧಿಯಲ್ಲಿ ಆಥೆನ್ಸ್‌ನ ಧವಳ ಕೀರ್ತಿ ಎಲ್ಲೆಡೆ ಪಸರಿಸಿತು. ಆದರೆ ಆ ಕೀರ್ತಿ ವೈಭವ ಬಹುಕಾಲ ಉಳಿಯಲಿಲ್ಲ. ದುರದೃಷ್ಟಕ್ಕೆ ಗ್ರೀಕರಲ್ಲಿ ಅಂತಃಕಲಹ ಪ್ರಾರಂಭವಾಯಿತು. ನೆರೆಯ ಸ್ಪಾರ್ಟಾ ರಾಜ್ಯದೊಂದಿಗೆ ಅಥೆನ್ಸ್ ದೀರ್ಘಕಾಲದ ಘರ್ಷಣೆಯಲ್ಲಿ ತೊಡಗಿತು. ಕೊನೆಗೆ "ಪೆಲೊಪನೀಷಿಯನ್" ಯುದ್ಧದಲ್ಲಿ ಅಥೆನ್ಸ್ ಸ್ಪಾರ್ಟಾ ಕೈಯಲ್ಲಿ ಸೋಲನ್ನನುಭವಿಸಿತು. ಇದೊಂದು ದುರಂತದ ನಿರ್ಣಾಯಕ ಯುದ್ಧ. ಅಥೆನ್ಸ್‌ನ ಅಧಃಪತನಕ್ಕೆ ನಾಂದಿಯಾಯಿತೆಂದೇ ಹೇಳಬೇಕು. ಈ ಮಹಾನ್ ಮಾದರೀ ರಾಜ್ಯ ಪತನವಾದಾಗ ಅದರ ಪರಿಣಾಮಗಳು ಇತರ ರಾಜ್ಯಗಳ ಮೇಲೆ ಆಗದಿರುವುವೇ ? ಅದರ ಪ್ರಯುಕ್ತ ಇಡೀ ಗ್ರೀಸ್ ದೇಶ ದುರ್ದೆಸೆಗೆ ಒಳಗಾಯಿತು. ಎಲ್ಲೆಲ್ಲೂ ಅರಾಜಕತೆಯ ತಾಂಡವ. ಧೀರ್ಘಕಾಲದಿಂದ ರೂಢಿಸಿಕೊಂಡಿದ್ದ ಉತ್ಕೃಷ್ಟ ಪರಂಪರೆಗಳು ಜನರಿಂದ ಮರೆಯಾದುವು. ಪ್ರಜಾ ಪ್ರಭುತ್ವದ ಮೌಲ್ಯಗಳು ಗಾಳಿಗೆ ತೂರಲ್ಪಟ್ಟುವು. ದೇಶದಲ್ಲಿ ಶಾಂತಿ ಸುವ್ಯವಸ್ಥೆ ಶಿಥಿಲವಾಯಿತು. ಜನರಲ್ಲಿ ಅಸಂತುಷ್ಟಿ, ದುರಾಗ್ರಹ ಇತ್ಯಾದಿಗಳು ವೃದ್ಧಿಯಾದುವು. ಆಡಳಿತದಲ್ಲಿ ದಕ್ಷತೆ ಇಲ್ಲದಾಯಿತು. ಪ್ರಜೆಗಳು, ಧರ್ಮ, ನ್ಯಾಯ, ನೀತಿ ಮುಂತಾದುವುಗಳಲ್ಲಿ ವಿಶ್ವಾಸವನ್ನು ಕಳೆದುಕೊಂಡರು. ರಾಜಕೀಯ ನಿಷ್ಠೆ ಕ್ಷೀಣಿಸಿತು. ಇದೇ ವೇಳೆ ಮತ್ತೊಂದು ದುರಂತ ಕಾದಿತ್ತು. ಅವಿವೇಕಿಗಳಾದ

ಕೆಲವರು ನಿರಪರಾಧಿ ಸೋಕ್ರಟೀಸ್‌ನನ್ನು ಅನ್ಯಾಯವಾಗಿ ಮರಣ ದಂಡನೆಗೆ ಗುರಿಪಡಿಸಿದರು. ಇದೊಂದು ಪ್ರಪಂಚ ಕಂಡ ಮಹಾದುರಂತ. ಗುರುವಿನ ಮರಣ ತರುಣ ಪ್ಲೇಟೋನ ಮೇಲೆ ವಿಪರೀತ ಪರಿಣಾಮವನ್ನುಂಟು ಮಾಡಿತು. ಸಕಲ ವಸ್ತು ವಿಷಯಗಳಲ್ಲಿ ಜಿಗುಪ್ಸೆ ಮೂಡಿತು. ಆಗ ಸಮಸ್ತ ಜಗತ್ತೇ ಶೂನ್ಯ. ಎಲ್ಲೆಲ್ಲೂ ಅರಾಜಕತೆ ದುಷ್ಟ ಹಾಗೂ ಸ್ವೇಚ್ಛಾ ಪ್ರವೃತ್ತಿಗಳು ಜನರಲ್ಲಿ ಹೆಚ್ಚಿದುವು. ನಿರಂಕುಶ ಪ್ರಭುಗಳ ದಬ್ಬಾಳಿಕೆ ಪ್ರಾರಂಭವಾಯಿತು. ಅನೀತಿ, ಅನ್ಯಾಯ ಆಕ್ರಮಗಳು ಜನರಲ್ಲಿ ಸಾಮಾನ್ಯವಾದವು. ಈ ಗೊಂದಲ ಮಯ ಸನ್ನಿವೇಶ ಬುದ್ಧಿ ಜೀವಿಗಳನ್ನು ಅಂತಕಕ್ಕೆ ಗುರಿ ಮಾಡಿತು. ಮನುಷ್ಯನಿಗೆ ಅತಿ ಉಪಯುಕ್ತವಾದ ಸರಕಾರ ಪದ್ಧತಿ ಯಾವುದಿರಬೇಕೆಂಬ ಬಗ್ಗೆ ಬಹಿರಂಗ ಚರ್ಚೆಗಳು ಪ್ರಾರಂಭವಾದುವು. ಈ ಸನ್ನಿವೇಶದಲ್ಲಿ ಪ್ಲೆಟೋ ತೆಪ್ಪಗೆ ಕುಳಿತುಕೊಳ್ಳಲು ಸಾಧ್ಯವೆ ? ದೀರ್ಘ ಚಿಂತನೆಯಲ್ಲಿ ತೊಡಗುತ್ತಾನೆ. ಬಗೆ ಬಗೆಯ ಕಲ್ಪನೆಗಳು ಮೂಡುವವು. ಏಕ ಕಾಲಕ್ಕೆ ಹಲವು ಸಮಸ್ಯೆಗಳು ಅವನನ್ನು ಕಾಡತೊಡ ಗಿದವು. ಸಮಾಜದ ಒಳಿತನ್ನು ಸಾಧಿಸುವುದು ಹೇಗೇ? ಪ್ರಜರ ಆಶೋತ್ತರಗಳು ಹೇಗಾದರೆ ಈಡೇರುತ್ತವೆ ? ಈ ದೆಸೆಯಲ್ಲಿ ಸಮಾಜದ ವ್ಯವಸ್ಥೆ ಹೇಗಿರಬೇಕು ? ರಾಜ್ಯ ಹೇಗೆ ಸಂಘಟಿಸಲ್ಪಡತಕ್ಕದ್ದು ? ಆಳುವವರು ಯಾರು ? ಆಳಿಸಿಕೊಳ್ಳುವವರು ಯಾರು ? ಇವರ ಪರಸ್ಪರ ಹೊಣೆಗಾರಿಕೆ ಗಳೇನು ? ಚ್ಯುತಿ ಇಲ್ಲದ ಆದರ್ಶ ರಾಜ್ಯ ಸ್ಥಾಪನೆ ಸಾಧ್ಯ

ವಾದೀತೇ ? ಸಾಧ್ಯವಾಗುವುದಾದರೆ ಅದರ ಸ್ವರೂಪವೇನು ? ಅದರ ಇತಿ ಮಿತಿಗಳೇನು ? ಇವೇ ಮುಂತಾದ ವಿಷಯುಗಳು ಅವನ ಮನಸ್ಸಿನಲ್ಲಿ ತಾಕಲಾಡಿದುವು. ಇಂಥಹವೇ ಕೆಲವು ವಿಷಯುಗಳನ್ನು ಕುರಿತು ಪ್ಲೇಟೋ ತನ್ನ "ರಿಪಬ್ಲಿಕ್"ನಲ್ಲಿ ಬಹು ಸ್ವಾರಸ್ಯವಾಗಿ ಚರ್ಚಿಸಿದ್ದಾನೆ.

## ೯. ರಾಜ್ಯದ ಸ್ವರೂಪ

ರಾಜ್ಯದ ಸ್ವರೂಪ ಹಾಗೂ ಸಂಘಟನೆಯು ಬಗ್ಗೆ ಪ್ರಾಚೀನ ಗ್ರೀಕರ ಅಭಿಪ್ರಾಯುಗಳು ಬಹು ಮನನೀಯು ವಾಗಿದೆ. ಯಾವ ಊಹೆಗೂ ನಿಲುಕದ ವಾಸ್ತವಿಕ ದೃಷ್ಟಿ ಕೋನ ಅವರದು. ಆ ಪ್ರಕಾರ ರಾಜ್ಯ ಒಂದು ನೈತಿಕ ಸಂಸ್ಥೆ. ಸಮಸ್ತ ವಿಷಯುಗಳಿಗೂ ಕೇಂದ್ರಬಿಂದು. ಮನು ಷ್ಯನ ಜೀವನವನ್ನು ಉಜ್ವಲಗೊಳಿಸಿ, ಸಮಾಜವನ್ನು ಸುವ್ಯ ವಸ್ಥೆಯಲ್ಲಿಡುವ ಮೂಲ ಸಾಧನ. ಪ್ರತಿ ಪ್ರಜೆಯು ಆಚಾರ ವಿಚಾರ ವ್ಯವಹಾರಗಳನ್ನು ಕ್ರಮಬದ್ಧಗೊಳಿಸಿ, ವಿವಿಧ ಚಟುವಟಿಕೆಯು ಮೇಲೆ ನಿಯುಂತ್ರಣಾಧಿಕಾರವನ್ನು ಸ್ಥಾಪಿ ಸುವ ಸಜೀವ ಸಂಸ್ಥೆ. ರಾಜ್ಯವೆಂಬುದೊಂದು ಜೀವನದ ಗುರಿ. ವ್ಯಕ್ತಿಯು ಸರ್ವತೋಮುಖ ವಿಕಾಸದ ಮೂರ್ತ ರೂಪ. ಸಮಗ್ರ ಪ್ರಗತಿಯು ಸಂಕೇತ. ವ್ಯಕ್ತಿ ಅಂತಹ ರಾಜ್ಯದ ಪ್ರಜೆಯಾಗಿರುವುದೊಂದು ಪುಣ್ಯ. ಪ್ರಜಾಪತ್ಯ ಪ್ರಜೆಯು ವೃತ್ತಿ. ರಾಜಕಾರಣದಲ್ಲಿ ಭಾಗವಹಿಸುವುದೊಂದು

ವಿಶೇಷ ಸೌಲಭ್ಯ. ಅದೊಂದು ಆದ್ಯ ಕರ್ತವ್ಯ. ಹೀಗೆ ಸಮಸ್ತ ವಸ್ತು ವಿಶೇಷಗಳಿಗೆ ಕಾರಣೀಭೂತವಾದ, ಅಧಿಕಾರಯುಕ್ತ, ಶಕ್ತಿ ಸಂಪನ್ನ ಸಂಸ್ಥೆಯೇ ರಾಜ್ಯವೆಂಬುದಾಗಿ ಗ್ರೀಕರು ಭಾವಿಸಿದ್ದರು. ಸ್ವಲ್ಪ ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ಪ್ಲೇಟೋ ವ್ಯಕ್ತ ಮಾಡುತ್ತಾನೆ.

ಇನ್ನು ಮನುಷ್ಯನಿಗೆ ವಿವಿಧ ಬಯಕೆಗಳು ಮತ್ತು ಆವಶ್ಯಕತೆಗಳಿವೆ ಎಂಬುದು ಸಹಜ ನಿತ್ಯ ಜೀವನಕ್ಕೆ ಅನೇಕ ಸೌಕರ್ಯ-ಸಾಮಾಗ್ರಿಗಳು ಬೇಕು. ಅವುಗಳ ಪರಸ್ಪರ ಪೂರೈಕೆಯಾಗಬೇಕಾದರೆ ಜನರು ಒಂದು ವ್ಯವಸ್ಥೆಗೆ ಒಳಪಡಲೇಬೇಕು. ಒಂದು ನಿಯಮಕ್ಕೆ ಬದ್ಧರಾಗಬೇಕು. ಏಕೆಂದರೆ ಎಲ್ಲರೂ ಸ್ವಾವಲಂಬಿಗಳಲ್ಲ. ಪರಸ್ಪರ ಅವಲಂಬನೆ ಸಮಾಜದ ವೈಶಿಷ್ಟ್ಯ ಓರ್ವನು ಒಂದು ಕೆಲಸ ಮಾಡಿದರೆ, ಮತ್ತೋರ್ವನು ಇನ್ನೊಂದು ಕೆಲಸ ಮಾಡುತ್ತಾನೆ. ಹೀಗೆ ವಿವಿಧ ಜನತೆಯ ಸಮಗ್ರ ದುಡುಮೆಯನ್ನು ಕ್ರಮಗೊಳಿಸಿ, ಸರ್ವರ ಚಟುವಟಿಕೆಗಳನ್ನು ನಿಯಂತ್ರಿಸಲು ರಾಜ್ಯವೆಂಬ ಸಂಸ್ಥೆ ತಲೆದೋರುತ್ತದೆಂದು ಪ್ಲೇಟೋ ಅಭಿಪ್ರಾಯಪಡುತ್ತಾನೆ. ರಾಜ್ಯದ ಸ್ವರೂಪ, ಧ್ಯೇಯ, ಕಾರ್ಯಾಚರಣೆ ಇತ್ಯಾದಿ ವಿಷಯಗಳ ಬಗ್ಗೆ ಆಧುನಿಕ ರಾಜಕೀಯ ತಜ್ಞರು ಪ್ಲೇಟೋನ ಅಭಿಪ್ರಾಯಗಳನ್ನು ಪುರಸ್ಕರಿಸುತ್ತಾರೆ.

# ೧೦. ಸಮಾಜದ ವರ್ಗೀಕರಣ

ಮಾನವನ ಸ್ವಭಾವ ಒಂದೇ ತೆರನಾಗಿಲ್ಲ. ವೈವಿಧ್ಯ ಪೂರ್ಣವಾಗಿದೆ. ಹಾಗೆ ಅವನಲ್ಲಿ ಅಂತರ್ಗತವಾದ ಚೈತನ್ಯದ ವಿಷಯದಲ್ಲೂ ಅಷ್ಟೆ. ಒಬ್ಬ "ಉತ್ತಮ"ನಾದರೆ ಇನ್ನೊಬ್ಬ "ಮಧ್ಯಮ" ಮೊಗದೊಬ್ಬ "ಸಾಮಾನ್ಯ". ಈ ತಾರತಮ್ಯ ವ್ಯಕ್ತಿಗಳಲ್ಲಿ ಕಂಡು ಬರುವುದು ಸಹಜ. ಪ್ರಕೃತಿ ಧರ್ಮ ಕ್ಕನುಗುಣವಾಗಿ ವೈವಿಧ್ಯತೆ ಇದ್ದೇ ಇದೆ. ಹಾಗಿರುವಲ್ಲಿ ಸಮಾಜದ ವಿವಿಧ ಸ್ವಭಾವದ ಸಮಸ್ತ ಜನರನ್ನೂ ಮೂರು ಮೂಲ ಭೂತ ಗುಣಗಳ ಆಧಾರದ ಮೇಲೆ ವಿಂಗಡಿಸಲಾಗಿದೆ. ಈ ಮೂರು ಗುಣಗಳ ಸಮ್ಮಿಲನವೇ ಆದರ್ಶರಾಜ್ಯದ ಸಂಘ ಟನೆಗೆ ಆಧಾರವಾಗಿ ಪರಿಣಮಿಸುತ್ತದೆಂದು ಪ್ಲೇಟೋ ಭಾವಿ ಸುತ್ತಾನೆ. ಒಂದನೇಯ ಮೂಲಭೂತಗುಣ "ರೀಸನ್" (ಸಾತ್ವಿಕ). ಎರಡನೇಯದು "ಸ್ಪಿರೀಟ್"(ರಾಜಸ), ಮೂರ ನೇಯದು "ಆಪಿಟೈಟ್"(ತಾಮಸ) ಎಂದು ಕರೆದಿದ್ದಾನೆ. ಭಾರತೀಯರ ವರ್ಣಾಶ್ರಮದಲ್ಲಿ ಬರುವ ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರರಿಗೆ ಮೇಲಿನ ವರ್ಗಿಕರಣವನ್ನು ಸ್ಥೂಲವಾಗಿ ಹೋಲಿಸಬಹುದು. ಮನುಷ್ಯನ ವಿವೇಚನಾ ಶಕ್ತಿ ಅಥವಾ "ಸಾತ್ವಿಕ" ಪ್ರವೃತ್ತಿಗೆ "ರೀಸನ್" ಎಂದೂ, ಅವನಲ್ಲಿ ವ್ಯಕ್ತವಾಗುವ ದೈಹಿಕ ಬಲ, ಧೈರ್ಯ, ಥೈರ್ಯಗಳಿಗೆ 'ಸ್ಪಿರಿಟ್" ಎಂದೂ, ಮತ್ತೆ ಕೆಲವು ವಸ್ತುಗಳನ್ನು

ಪಡೆಯಬೇಕೆಂಬ ಹಂಬಲ ಅಥವಾ ಇಚ್ಛೆಗೆ "ಅಪಿಟೈಟ್" ಎಂದೂ ; ಇದು ತಾಮಸ ಪ್ರವೃತ್ತಿಯ ಸಂಕೇತವೆಂದೂ ಕರೆಯುತ್ತಾನೆ. ಮೇಲೆ ವಿವರಿಸಿದ ಗುಣಗಳು ಪ್ರತಿ ವ್ಯಕ್ತಿಯಲ್ಲಿ ಅಂತರ್ಗತವಾಗಿರುವುದು ಸಹಜ. ಆದರೆ ಗುಣಗಳು ವ್ಯಕ್ತವಾಗುವ ಪ್ರಮಾಣ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಓರ್ವನಲ್ಲಿ ಒಂದು ಗುಣ ಅಥವಾ ಪ್ರವೃತ್ತಿ ಅಧಿಕವಾಗಿದ್ದರೆ, ಇನ್ನೋರ್ವನಲ್ಲಿ ಕಡಿಮೆಯಾಗಿರಬಹುದು. ಓರ್ವನು ತಮೋಗುಣಪೂರ್ಣನಾದರೆ, ಮತ್ತೋರ್ವನು ರಜೋಗುಣಪೂರ್ಣವಾಗಿರುತ್ತಾನೆ. ಆದಾಗ್ಯೂ, ಪ್ರತಿ ವ್ಯಕ್ತಿಯಲ್ಲಿ ಸಾತ್ವಿಕ, ರಾಜಸ, ಮತ್ತು ತಾಮಸ ಗುಣಗಳು ಸಂಪೂರ್ಣವಾಗಿ ಅಥವಾ ಸಮಗ್ರವಾಗಿರಲು ಸಾಧ್ಯವಿಲ್ಲ. ಕಾರಣ, ಆಯಾ ವ್ಯಕ್ತಿಯ ಗುಣ ಅಥವಾ "ಸ್ವಭಾವಕ್ಕೆ" ಅನುಗುಣವಾಗಿ ಸಮಾಜ ಸಂಘಟಿಸಲ್ಪಟ್ಟು ಜನರ ವರ್ಗೀಕರಣವಾಗತಕ್ಕದ್ದು. ಒಂದೊಂದು ವರ್ಗಕ್ಕೆ ಒಂದೊಂದು ವೃತ್ತಿ ಅಥವಾ ಕರ್ತವ್ಯಗಳನ್ನು ನಿಗದಿಪಡಿಸಬೇಕು. ಸಾತ್ವಿಕ ಗುಣವುಳ್ಳವರು ಸಹಜವಾಗಿ ವಿವೇಕಿಗಳೂ, ಶಾಸ್ತ್ರಜ್ಞರೂ, ನೀತಿಸಂಪನ್ನರೋ ಪ್ರತಿಭಾ ಶಾಲಿಗಳೂ ಆಗಿರುತ್ತಾರೆ. ಇವರನ್ನು ಆಳುವ ವರ್ಗಕ್ಕೆ ಸೇರಿಸಬೇಕು. ಪ್ರಭುತ್ವದ ರಾಜ ಸೂತ್ರಗಳನ್ನು ಹಿಡಿದು, ಅಧಿಕಾರ ಚಲಾಯಿಸಿ ರಾಜ್ಯಭಾರ ಮಾಡುವುದು ಇವರ ಹೊಣೆಗಾರಿಕೆ. ತರುವಾಯ, ರಜೋಗುಣವುಳ್ಳವರು ಸಹಜವಾಗಿ ಬಲಿಷ್ಟರು. ಧೈರ್ಯ ಸ್ಥೈರ್ಯದ ಕಟ್ಟಾಳುಗಳು. ಸೈನಿಕರಾಗಿ ರಾಜ್ಯದ ರಕ್ಷಣೆ ಮಾಡುವುದು

ಹಾಗೂ ಪೋಲೀಸ್ ವೃತ್ತಿಯಿಂದ ಸಮಾಜದಲ್ಲಿ ಕಾಯಿದೆ ಸುವ್ಯವಸ್ಥೆ ಏರ್ಪಡಿಸುವದು ಇವರ ಕರ್ತವ್ಯ. ಮತ್ತೆ ಮೂರನೇಯವರು ತಾಮಸ ಗುಣವುಳ್ಳವರು. ಇವರು ಸಾಮಾನ್ಯ ಪ್ರಜೆಗಳು. ಉತ್ತನೆ-ಬಿತ್ತನೆ ಮಾಡಿ, ಕೃಷಿ ಮತ್ತು ಇತರ ಉದ್ಯಮಗಳಲ್ಲಿ ತೊಡಗಿರುವ ಉಾಳಿಗದವರು. ಸಮಾಜಕ್ಕೆ ಬೇಕಾದ ಸಮಸ್ತ ಸೌಕರ್ಯ-ಸಾಮುಗ್ರಿಗಳನ್ನು ಪೂರೈಸುವುದು ಇವರ ಹೊಣೆಗಾರಿಕೆ.

ಹೀಗೆ ಸಾತ್ವಿಕ ಗುಣಪೂರ್ಣರು "ಬಂಗಾರ"ವಾದರೆ, ರಜೋಗುಣವುಳ್ಳವರು "ಬೆಳ್ಳಿ" ಮತ್ತೆ ತಾಮಸ ಗುಣವುಳ್ಳವರು "ಕಬ್ಬಿಣ". ಲೋಹಗಳಲ್ಲಿ ಕಂಡುಬರುವ ಗುಣ ವಿಶೇಷಗಳನ್ನು ಸಮಾಜದ ಭಿನ್ನ ಭಿನ್ನ ಸ್ವಭಾವದ ಜನರಿಗೆ ಹೋಲಿಸಲಾಗಿದೆ.

## ೧೧. ಗುಣ ಮತ್ತು ವೃತ್ತಿ

ಇದು ಪ್ಲೇಟೋ ಮಾಡಿದ ಆದರ್ಶ ರಾಜ್ಯದ ಸ್ಥೂಲ ವರ್ಗೀಕರಣ. ಆದರೆ ಇಲ್ಲಿ ಒಂದು ವಿಷಯ ಗಮನಾರ್ಹ. ಅದೇನೆಂದರೆ ವ್ಯಕ್ತಿಯ ಗುಣ ಅಥವಾ ಸ್ವಭಾವ (ಚೈತನ್ಯ) ಕ್ಕನುಗುಣವಾಗಿ ವ್ಯಕ್ತಿಯನ್ನು ಆಯಾ ವರ್ಗಕ್ಕೆ ಸೇರಿಸಲ್ಪಟ್ಟು, ಅದಕ್ಕನುಗುಣವಾದ ವೃತ್ತಿ ಅಥವಾ ಕಸಬನ್ನು ಅವಲಂಬಿಸತಕ್ಕದ್ದು. ಸ್ವಭಾವಕ್ಕನುಗುಣವಾಗಿ ನಿರ್ದಿಷ್ಟ

ಕರ್ತವ್ಯವನ್ನು ನಿರ್ವಹಿಸತಕ್ಕದ್ದು. ನಮ್ಮ ಭಾರತೀಯ ವರ್ಣಾಶ್ರಮ ಧರ್ಮದ ಪ್ರಕಾರ ವ್ಯಕ್ತಿಯ ಹುಟ್ಟು ಅಥವಾ ವಂಶ ಅವರವರ ವೃತ್ತಿ ಅಥವಾ ಯೋಗ್ಯತೆಯನ್ನು ನಿರ್ಧರಿಸುವ ಮಾನದಂಡ. ಒಬ್ಬ ಶೂದ್ರನು ಯೋಗ್ಯತೆ ಇದ್ದರೂ ಜ್ಞಾನಾರ್ಜನೆ, ವೇದಾಧ್ಯಯನ ಮುಂತಾದ ಬ್ರಹ್ಮಕಾರ್ಯಗಳಲ್ಲಿ ತೊಡಗುವಂತಿಲ್ಲ. ಹುಟ್ಟು ಮತ್ತು ಅದಕ್ಕನುಗುಣವಾದ ವೃತ್ತಿಯ ವಿಷಯದಲ್ಲಿ ಬಲು ಕಟ್ಟು ನಿಟ್ಟಿನ ಸಾಮಾಜಿಕ ವ್ಯವಸ್ಥೆ ನಮ್ಮದು. ಆದರೆ ಪ್ಲೇಟೋನ ಆದರ್ಶ ರಾಜ್ಯದ ರೀತೀನೇ ಬೇರೆ. ಇಲ್ಲಿ ವ್ಯಕ್ತಿಯ * ಹುಟ್ಟು ಅಥವಾ ವಂಶ

---

* ಈ ಹಿನ್ನೆಲೆಯಲ್ಲಿ ನಮ್ಮ ವರ್ಣ ವ್ಯವಸ್ಥೆಯನ್ನು ವಿವೇಚಿಸುವುದು. ಸೂಕ್ತ. ಸತ್ವ, ರಜ ಮತ್ತು ತಮೋ ಗುಣಗಳನ್ನಾದರಿಸಿ ವರ್ಣ ವ್ಯವಸ್ಥೆ ಆರಂಭವಾಯಿತು. ಈ ಮೂಲಗುಣಗಳು ಮನುಷ್ಯನ ಸ್ವಭಾವವನ್ನು ನಿರ್ಧರಿಸುವವು. ಸ್ವಭಾವದಂತೆ ಕರ್ಮ. ಗುಣಕರ್ಮಗಳಂತೆ ವರ್ಣವಿಭಾಗ ಇದನ್ನಾಧರಿಸಿ ಇಡೀ ಮಾನವ ಕೋಟಿಯನ್ನೂ ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ನಾಲ್ಕು ವರ್ಣಗಳಾಗಿ ವಿಭಾಗ. ಇಲ್ಲಿ ಯಾವುದೇ ತಾರ ತಮ್ಯದ ಅಥವಾ ಮೇಲು ಕೀಳಿನ ಪ್ರಶ್ನೆಗಳೇ ಇಲ್ಲ. ಕೇವಲ ಅವರ ಗುಣ ಕರ್ಮಗಳಿಗನುಗುಣವಾಗಿ ಮಾಡಿದ ವಿಭಾಗ ಅಷ್ಟೇ. ಆದರೆ ಈ ರೀತಿ ಪ್ರಾರಂಭವಾದ ವರ್ಣ ವ್ಯವಸ್ಥೆ ಕ್ರಮೇಣ "ಹುಟ್ಟಿ" ನಿಂದ ಎಂಬ ಸಂಕುಚಿತ ದೃಷ್ಟಿ ತಳೆದು ಕೀಳು ವಿಭಜನೆಗೆ ಎಡೆಮಾಡಿತು. ಇದೆ ನಮ್ಮ ದುರಂತ. ಇಂತಹ ದೃಷ್ಟಿಯ ವರ್ಣ ವ್ಯವಸ್ಥೆ ಅರ್ಥ ಶೂನ್ಯ. ಇಲ್ಲಿಂದಲೇ ಉಚ್ಚ-ನೀಚ. ಮೇಲು-ಕೀಳು ಎಂಬ ಭಾವನೆಗಳು ಬೆಳೆದು ಕ್ಲಿಷ್ಟ ಹಾಗೂ ಸಂಕೀರ್ಣಗೊಂಡ ಭಾರತೀಯ ಸಮಾಜ ನಿರ್ಮಾಣವಾಯಿತು.

ಅವನ ಅಥವಾ ಅವಳ ಯೋಗ್ಯತೆಯನ್ನು ಅಳೆಯುವ ಮಾನದಂಡವಲ್ಲ. ವ್ಯಕ್ತಿಯ "ಗುಣ" ಅಥವಾ ಸ್ವಭಾವ ಮುಖ್ಯ. ಇದೇ ಸಮಾಜ ವರ್ಗೀಕರಣ ವ್ಯವಸ್ಥೆಯ ಮೂಲ ತಳಹದಿ. ಈ ತತ್ತ್ವದ ಆಧಾರದ ಮೇಲೆ ಜನರು ತಮ್ಮ ಸ್ವಭಾವ ಮತ್ತು ಅಭಿರುಚಿಗೆ ಅನುಗುಣವಾದ ವೃತ್ತಿ ಅಥವಾ ಕಸಬನ್ನು ಅವಲಂಬಿಸಿ ಸಮಾಜದ ಉನ್ನತಿಯನ್ನು ಸಾಧಿಸಬೇಕೆಂದು ಪ್ಲೆಟೋ ಅಭಿಪ್ರಾಯಪಡುತ್ತಾನೆ. ವಂಶಾನುಗತವಾದ ವೃತ್ತಿಯ ಅವಲಂಬನೆ ಸಮಾಜದ ಆರ್ಥಿಕಸಬಂಧವಾದ ಪ್ರಗತಿಗೆ ಅಡ್ಡಿಯಾಗುತ್ತದೆ. ಹುಟ್ಟಿನಿಂದ ಎಲ್ಲರೂ ಸಮಾನರು. ವ್ಯಕ್ತಿ ವ್ಯಕ್ತಿಗಳಲ್ಲಿ ಸಮಾನತೆ ಇರಬೇಕೆಂಬುದು ನಿಜ. ಹಾಗೆಂದು ಎಲ್ಲರಿಗೂ ಸಮಾನ ಅವಕಾಶ ಮತ್ತು ಸಮಾನ ಸ್ಥಾನವನ್ನು ಕಲ್ಪಿಸುವುದು ಸಮಾಜಕ್ಕೆ ಕೇಡು. ಹಾಗೆ ಮಾಡುವುದರಿಂದ ಆರ್ಥಿಕ ಪ್ರಗತಿ ಕುಂಠಿತವಾಗಿ ಆಡಳಿತದಲ್ಲಿ ದಕ್ಷತೆಗೆ ಖಂಡಿತ ಸಂಚಕಾರ ಒದಗುತ್ತದೆ. ಏಕೆಂದರೆ ಎಲ್ಲರಲ್ಲೂ ಒಂದೇ ತರನಾದ ಚೈತನ್ಯ ಅಥವಾ ಯೋಗ್ಯತೆಗಳಿರುವುದು ಅಸಂಭವ. ಕಾರಣ ಪ್ರತಿಯೊಬ್ಬ ವ್ಯಕ್ತಿ ತನ್ನ ಸ್ವಭಾವ, ಅಭಿರುಚಿ, ಯೋಗ್ಯತೆ, ಒಲವು ನಿಲವುಗಳಿಗನುಗುಣವಾಗಿ, ಆಯಾ ವರ್ಗಕ್ಕೆ ಸೇರಿ, ಅದಕ್ಕನುಗುಣವಾದ ವೃತ್ತಿ ಅಥವಾ ಕಸಬನ್ನು ಅವಲಂಬಿಸಬೇಕು. ಜೊತೆಗೆ ಕೆಲಸದಲ್ಲಿ ಶ್ರದ್ಧೆ ಮತ್ತು ಪರಿಶ್ರಮವಿರತಕ್ಕದ್ದು. ಇದಕ್ಕೆ ವ್ಯತಿರಿಕ್ತವಾಗಿ ಯಾರೂ ವರ್ತಿಸುವಂತಿಲ್ಲ. ವ್ಯಕ್ತಿಯ

ಯೋಗ್ಯತೆಗನುಸರಿಸಿ ವರ್ಗ ವ್ಯವಸ್ಥೆ. ಆದಕ್ಕನುಗುಣವಾಗಿ ವೃತ್ತಿ ಅಥವಾ ಕಸಬನ್ನು ನಿಗದಿಪಡಿಸತಕ್ಕದ್ದು. ಹೀಗಾದರೆ ದಕ್ಷತೆ ಮೂಡಿ, ಸಮಾಜದಲ್ಲಿ ಒಂದು ತೆರನ ವರ್ಗೀಕರಣ ವಾದಂತಾಗಿ ಶ್ರಮ ವಿಭಜನೆ (division of labour)ಯ ವ್ಯವಸ್ಥೆ ಏರ್ಪಡುವುದು. ಇದು ಅತಿ ಅವಶ್ಯ. ಏಕೆಂದರೆ, ಎಲ್ಲರೂ ಏಕೀಭವಿಸಿ ತಮಗೆ ನಿರ್ವಹಿಸಿದ ಕೆಲಸವನ್ನು ತಮ್ಮ ಯೋಗ್ಯತಾನುಸಾರ ಶ್ರದ್ಧೆ ಮತ್ತು ನಿಷ್ಠೆಯಿಂದ ನಿರ್ವಹಿಸಿದರೆ, ಸಮಾಜದಲ್ಲಿ ಆರ್ಥಿಕ ಸ್ಥಿರತೆ ಹೆಚ್ಚಿ, ಐಕ್ಯತೆ ಮೂಡುತ್ತದೆ. ಐಕ್ಯತೆ ಮತ್ತು ಆರ್ಥಿಕ ಸ್ಥಿರತೆಗಳೆರಡರ ಸಮತೋಲನ ಏರ್ಪಟ್ಟು, ಸಾಮಾಜಿಕ ಹಿತ ಅಥವಾ ಕಲ್ಯಾಣ ಸಾಧಿಸಲ್ಪ-ಡುವದೆಂಬುದು ಪ್ಲೇಟೋನ ಅಭಿಪ್ರಾಯ.

## ೧೨. ವರ್ಗ ವ್ಯವಸ್ಥೆ ಮತ್ತು ಸಾಮಾಜಿಕ ನ್ಯಾಯ

ಪ್ಲೇಟೋ ಪ್ರತಿಪಾದಿ ವರ್ಗ ವ್ಯವಸ್ಥೆ ನಿಜಕ್ಕೂ ಮೆಚ್ಚು ವಂತಹದು. ಸರ್ವಕಾಲಕ್ಕೂ ಅನುಕರಣೀಯ ಮೌಲ್ಯ ಅದಕ್ಕುಂಟು. ದಕ್ಷತೆ ಮತ್ತು ಅರ್ಹತೆಯನ್ನಾದರಿಸಿ ವ್ಯಕ್ತಿಗೆ ಸ್ಥಾನ–ಮಾನಗಳನ್ನು ನೀಡುವುದು ಮತ್ತು ಆದಕ್ಕನುಗುಣ ವಾದ ವೃತ್ತಿಯನ್ನು ನಿಗದಿಪಡಿಸುವುದು ಸಾಮಾಜಿಕ ಸ್ವಾಸ್ಥ್ಯಕ್ಕೆ ಅತಿ ಅವಶ್ಯ. ಎಲ್ಲರೂ ಏಕೀಭವಿಸಿ ತಮ್ಮ ಯೋಗ್ಯತಾನುಸಾರ ದುಡಿದಾಗ ಆರ್ಥಿಕ ಸ್ಥಿರತೆ ಖಂಡಿತ ನೆಲೆಗೊಳ್ಳುವುದು. ಜನ ರಲ್ಲಿ ಐಕ್ಯತೆ ಬಲಗೊಳ್ಳುವುದು. ಪರಸ್ಪರ ಹೊಣೆಗಾರಿಕೆಯ ಅರಿವು ಆರ್ಥಿಕ ವಿಷಮತೆಯನ್ನು ತೊಲಗಿಸಿ, ವಿವಿಧ ಬಣಗಳಲ್ಲಿ

ಸಾಮರಸ್ಯ ಮೂಡಿಸುವುದು. ರಾಜ್ಯದಲ್ಲಿ ಆರ್ಥಿಕ ಸ್ಥಿರತೆ ಮತ್ತು ಐಕ್ಯತೆಗಳಿಲ್ಲದೆ ಏನನ್ನೂ ಸಾಧಿಸಲಾಗುವುದಿಲ್ಲ. ಆರ್ಥಿಕ ಅಸಮತೆ, ಅಧಕ್ಷತೆ, ಅಸೌಖ್ಯವೇ ಮೊದಲಾದ ಸಮಸ್ಯೆಗಳನ್ನು ಆಧುನಿಕ ರಾಜ್ಯಗಳು ಎದುರಿಸುತ್ತಿರುವ ಸನ್ನಿವೇಶದಲ್ಲಿ ಸಮಾಜದ ವಿವಿಧ ವರ್ಗಗಳಿಗೆ ನ್ಯಾಯ (JUSTICE) ಒದಗಿಸುವುದೊಂದು ಬಹು ದುಸ್ತರದ ಕೆಲಸ. ಈ ದೆಸೆಯಲ್ಲಿ ಸರಕಾರದ ಪ್ರಯತ್ನಗಳು ವಿಫಲವಾಗುತ್ತಿವೆ. ಸುಧಾರಣಾ ಕಾರ್ಯಗಳ ಯಶಸ್ವೀ ಕಾರ್ಯಾಚರಣೆಯಾಗು-ತ್ತಿಲ್ಲ. ನಮ್ಮದೇ ಒಂದು ಉದಾಹರಣೆ. ಜಾತಿ ಮತ್ತು ಮತ ಆಧರಿತ ಭಾರತೀಯ ಸಮಾಜ ವಿಷಮ ಸಮಾಜ. ಅಸಮಾ-ನತೆಯೊಂದು ದೊಡ್ಡ ಪಿಡುಗು. ಸಮಾಜದ ವರ್ಗ ವ್ಯವಸ್ಥೆ ಯಲ್ಲಿ ಅದರ ನಿವಾರಣೆ ನಿಜಕ್ಕೂ ಒಂದು ಜಟಿಲ ಸಮಸ್ಯೆ. ಹಿಂದುಳಿದವರು, ಮುಂದುವರಿದವರು, ಪ್ರಬಲರು-ದುರ್ಬಲರು, ಹರಿ-ಗಿರಿಜನರು, ಸ್ಪೃಶ್ಯ-ಅಸ್ಪೃಶ್ಯ ಎಂಬ ವರ್ಗ ವಿಂಗಡಣೆ, (ಮೀಸಲು) ಸ್ಥಾನ-ಮಾನ-ಸೌಲಭ್ಯಗಳ ಹಂಚಿಕೆಯಲ್ಲಿ ಅನು ಸರಿಸಬಹುದಾದ ಮಾನದಂಡ ದೋಷಪೂರಿತವಾಗಿಲ್ಲ. ಯಾವ ಕ್ರಮ ಅನುಸರಿಸಿದರೂ ಸರ್ವರಿಗೂ ಒಪ್ಪಿಗೆಯಾಗುವುದು ಅಸಂಭವ. ಅತೃಪ್ತಿ ಸದಾ ಇದ್ದೇ ಇರುತ್ತದೆ. ಈ ನಿಟ್ಟಿನಲ್ಲಿ ಆಲೋಚಿಸಿದಾಗ ಪ್ಲೇಟೋ ಪ್ರತಿಪಾದಿತ ವರ್ಗ ವ್ಯವಸ್ಥೆ ನಿಜಕ್ಕೂ ಪ್ರಶಂಶಾರ್ಹವಾದುದು. ಅದು ಪ್ರಚಲಿತ ಸಮಸ್ಯೆ ಗಳ ಮೇಲೆ "ಕ್ಷ ಕಿರಣ" ಬೀರಿ ನಮ್ಮನ್ನು ಬೆಳಕಿನತ್ತ ಕೊಂಡೊಯ್ಯುತ್ತದೆ.

# ೧೩. ಶಿಕ್ಷಣ ವ್ಯವಸ್ಥೆ

ಪ್ಲೇಟೋನ "ರಿಪಬ್ಲಿಕ್" ಕೇವಲ ರಾಜಕೀಯ ವಿಷಯವನ್ನು ಕುರಿತ ಹೊತ್ತಿಗೆಯಲ್ಲ. ಅದು ಒಂದು ದೃಷ್ಟಿಯಲ್ಲಿ ಶಿಕ್ಷಣವನ್ನು ಕುರಿತು ಬರೆದ ಗ್ರಂಥವೆಂಬುದು ಸರ್ವವಿದಿತ. ಶಿಕ್ಷಣದ ಬಗ್ಗೆ ಅವನು ವ್ಯಕ್ತಪಡಿಸಿದ ವಿಷಯಗಳು ಬಹು ಮನನೀಯವಾಗಿವೆ. ಸರ್ವಕಾಲಕ್ಕೂ ಸಲ್ಲುವ ಮೌಲ್ಯ ಅವುಗಳಿಗುಂಟು. ಶಿಕ್ಷಣವೆಂಬುದು ಅವನ ಅಭಿಪ್ರಾಯದಲ್ಲಿ ಒಂದು ''ಸೃಜನಾತ್ಮಕ ಶಕ್ತಿ'' (Creative force). ರಾಜ್ಯದ ಸಮಗ್ರ ಪ್ರಗತಿ ಶಿಕ್ಷಣವನ್ನಾಧರಿಸಿದೆ. ಅದರ ಮೂಲ ಉದ್ದೇಶ ಸತ್ಪ್ರಜೆಗಳನ್ನು ಸೃಷ್ಟಿಸುವುದು. ಪ್ರಜೆಗಳು ಒಳ್ಳೆಯವರಾಗಿದ್ದರೆ ಸಹಜವಾಗಿ ರಾಜ್ಯ ಒಳ್ಳೆಯದಾಗಿರುತ್ತದೆ. ಕಾರಣ ಒಳ್ಳೆಯ ಪ್ರಜೆಗಳನ್ನಾಗಿ ಪರಿವರ್ತಿಸುವ ಮೂಲ ಸಾಧನ ಆ ದೇಶದ ಶಿಕ್ಷಣ. ಸಮಾಜದ ಸ್ಥಿರತೆಯೂ ಉತ್ಕರ್ಷವೂ ಅದನ್ನೇ ಅವಲಂಬಿಸಿದೆ. ಪ್ರಭುತ್ವ ಅನೇಕ ಕಾಯಿದೆಗಳನ್ನು ರಚಿಸಿ ಜಾರಿಗೆ ತರಬಹುದು. ಇದು ಕಾರ್ಯತಃ ಎಷ್ಟರಮಟ್ಟಿಗೆ ಸಾಧ್ಯ? ಕೇವಲ ಕಾಯಿದೆಯ ಮೂಲಕ ವ್ಯಕ್ತಿಗಳ ಸ್ವಭಾವವನ್ನು ಪರಿವರ್ತಿಸುವುದೆಂದರೆ ಆಗದ ಮಾತು. ಜನರ ಒಳ್ಳೆತನ ಕಾಯಿದೆಯ ನಿಯಮಗಳಿಂದ ನೆಲೆಗೊಳ್ಳುವುದು ಕಷ್ಟ. ಪ್ರಜೆಗಳು ಸತ್ವಶಾಲಿಗಳಾಗದೆ ಮೂರ್ಖರಾಗಿಯೇ ಉಳಿದರೆ ಎಷ್ಟು ಕಾಯಿದೆಗಳನ್ನು ಜಾರಿಗೆ ತಂದರೂ ವ್ಯರ್ಥ. ಪ್ರಜರ ಸಹಜ ದೌರ್ಬಲ್ಯಗಳು ತೊಲಗಿ ವಿವೇಕಿಗಳಾಗಬೇಕೆಂದರೆ ಸರಿಯಾದ ಶಿಕ್ಷಣ ಬೇಕು. ಅಂತಹ ಶಿಕ್ಷಣವಿದ್ದರೆ ಕಾನೂನಿನ ಮೂಲಕ

ಜನರನ್ನು ನಿಯಂತ್ರಿಸುವ ಆವಶ್ಯಕತೆ ಬೀಳುವುದಿಲ್ಲವೆಂಬುದು ಪ್ಲೇಟೋನ ಅಭಿಪ್ರಾಯ.

ಹಾಗಾದರೆ ಶಿಕ್ಷಣ ಹೇಗಿರಬೇಕು ? ಅದನ್ನು ನಿಯಂತ್ರಿಸುವವರಾರು? ಅದರ ಇತಿ-ಮಿತಿಗಳೇನು? ಇತ್ಯಾದಿ ವಿಷಯಗಳು ಬಹು ಉದ್ಬೋಧಕವಾಗಿವೆ. ಪ್ಲೇಟೋನ ಅಭಿಪ್ರಾಯದಲ್ಲಿ ಶಿಕ್ಷಣ ಸಾರ್ವತ್ರಿಕವಾಗಿರಬೇಕು. ವಿಶಾಲ ತಳಹದಿಯ ಮೇಲೆ ರೂಪಿತವಾಗಿರತಕ್ಕದ್ದು. ಯಾವ ಒಬ್ಬ ಪ್ರಜೆಯೂ ಶಿಕ್ಷಣಕ್ಕೆ ಹೊರತಾಗಿರಬಾರದು. ಅಜ್ಞ ಹಾಗೂ ಅನಕ್ಷರಸ್ಥ ಪ್ರಜೆ ಪ್ರಜಾಪ್ರಭುತ್ವಕ್ಕೆ ಗಂಡಾಂತರಕಾರಿ. ಸಮಗ್ರ ಶಿಕ್ಷಣ ಪ್ರಭುತ್ವದ ಅಂಕಿತದಲ್ಲಿರತಕ್ಕದ್ದು. ಉಪಾಧ್ಯಾಯರು ಸರಕಾರದ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸಬೇಕು. ಶಿಕ್ಷಣದ ವಿಷಯದಲ್ಲಿ ತಂದೆ ತಾಯಿಗಳಾಗಲೀ, ಇತರರಾಗಲೀ, ಮಧ್ಯೆ ಪ್ರವೇಶ ಮಾಡುವಂತಿಲ್ಲ. ವಿದ್ಯಾರ್ಥಿಯ ವಯೋಮಾನಕ್ಕನುಸರಿಸಿ ಅಭ್ಯಾಸ ಕ್ರಮವನ್ನು ನಿಗದಿ ಮಾಡಲಾಗುವುದು. ಐದನೇ ವರ್ಷದಿಂದ ಹಂತ ಹಂತವಾಗಿ ಐವತ್ತನೇ ವರ್ಷದವರೆಗೆ ವಿವಿಧ ವಿಷಯಗಳಲ್ಲಿ ಅಭ್ಯಾಸ ಮುಂದುವರಿಸಲಾಗುವುದು. ಮೊದಲ ಹಂತದಲ್ಲಿ ಪ್ರಾಥಮಿಕ ಶಿಕ್ಷಣ; ಆರರಿಂದ ಹದಿನಾಲ್ಕು ವರ್ಷದ ವಯೋಮಿತಿಗೆ ಒಳಪಟ್ಟವರು, ತರುವಾಯ ಮಾಧ್ಯಮಿಕ ಶಿಕ್ಷಣ; ಹದಿನಾಲ್ಕರಿಂದ ಹದಿನೆಂಟರವರೆಗೆ, ಈ ಅವಧಿಯಲ್ಲಿ ಅಕ್ಷರಾಭ್ಯಾಸ, ಓದು, ಬರಹ, ಗಣಿತ, ವ್ಯಾಕರಣ, ವ್ಯಾಯಾಮ ಮತ್ತು ವಿವಿಧ ಕ್ರೀಡೆಗಳು ಮಕ್ಕಳ ಶಿಕ್ಷಣದ ಪ್ರಮುಖ ಅಂಶಗಳು. ಇಪ್ಪತ್ತರಿಂದ ಮೂವತ್ತು ವರ್ಷಗಳ

ವರೆಗೆ ಪ್ರೌಢ ಶಿಕ್ಷಣ. ಈ ಹಂತದಲ್ಲಿ ಗಣಿತ, ವ್ಯಾಕರಣ, ತರ್ಕ, ಖಗೋಳ ಇತ್ಯಾದಿ ವಿವಿಧ ಶಾಸ್ತ್ರಗಳಲ್ಲಿ ಪ್ರಾವೀಣ್ಯ ಸಂಪಾದನೆ. ಮೂವತ್ತರಿಂದ ಮೂವತ್ತೈದರವರೆಗೆ ಮತ್ತೊಂದು ಶಿಕ್ಷಣದ ಹಂತ ಇಲ್ಲಿ ಗಣಿತ ಹಾಗೂ ತತ್ವಜ್ಞಾನದ ಅಧ್ಯಯ-ನಕ್ಕೆ ಹೆಚ್ಚಿನ ಪ್ರಾಶಸ್ತ್ಯ. ಆ ತರುವಾಯ, ಸೈನಿಕ ಮತ್ತು ಸಾಮಾನ್ಯ ಆಡಳಿತದಲ್ಲಿ ಪರಿಣತಿ ಪಡೆಯಲು ಅನುವು ಮಾಡಿ ಕೊಡಲಾಗುವುದು. ಬಹು ಅಂಶ ಪ್ರಜೆಗಳ ಅಭ್ಯಾಸ ಇಲ್ಲಿಗೆ ಮುಕ್ತಾಯ. ಯಾವುದೇ ವ್ಯಕ್ತಿ ಉನ್ನತ ಶಿಕ್ಷಣದಲ್ಲಿ ಒಲವು ಅಥವಾ ಆಸಕ್ತಿ ತೋರಿಸದಿದ್ದಲ್ಲಿ, ಅಂತಹರನ್ನು ಅನರ್ಹ ಗೊಳಿಸಿ, ಆ ವ್ಯಕ್ತಿಯನ್ನು ಕೆಳದರ್ಜೆಯ ಊಳಿಗದ ಹಾಗೂ ರಕ್ಷಕರ ವರ್ಗಕ್ಕೆ ಸೇರಿಸಬೇಕೆಂದು ಪ್ಲೇಟೋ ಅಭಿಪ್ರಾಯ ಸೂಚಿಸುತ್ತಾನೆ. ಏಕೆಂದರೆ ಅವರು ತಾಮಸ ಮತ್ತು ರಾಜಸ ಗುಣ ಪ್ರಧಾನ ವ್ಯಕ್ತಿಗಳು. ಉನ್ನತ ವ್ಯಾಸಂಗಕ್ಕಾಗಲೀ, ಅಥವಾ ಉನ್ನತ ಹುದ್ದೆಗಳನ್ನು ಹೊಂದಲಿಕ್ಕಾಗಲೀ ಅನರ್ಹರು. ಅವರ ಸ್ಥಾನ ಕೃಷಿ, ಉದ್ಯಮ, ವಾಣಿಜ್ಯ ಇತ್ಯಾದಿ ಕ್ಷೇತ್ರ ಗಳಲ್ಲಿ ಈ ವರ್ಗದ ಜನರಿಗೆ ಶಿಕ್ಷಣದ ವ್ಯವಸ್ಥೆಯಲ್ಲಿ ಹೆಚ್ಚಿನ ಪ್ರಾಧಾನ್ಯತೆ ಇಲ್ಲ. ಏನಿದ್ದರೂ ಸಾತ್ವಿಕ ಗುಣಪೂರ್ಣರಾದ ಮೇಧಾವಿ ಹಾಗೂ ಪ್ರತಿಭಾವಂತ ವ್ಯಕ್ತಿಗಳಿಗೆ ಉನ್ನತ ಹಾಗೂ "ಪರಿಷ್ಕೃತ" ಶಿಕ್ಷಣ ಮೀಸಲು. ಇಂತಹರನ್ನು ಐವತ್ತನೇ ವಯಸ್ಸಿಗೆ ಆಯ್ಕೆ ಮಾಡಲಾಗುವುದು. ಈ ಹಂತದಲ್ಲಿ ಜ್ಞಾನ ಮತ್ತು ಅಧ್ಯಾತ್ಮದಲ್ಲಿ ವಿಶೇಷ ಪರಿಣತಿ ಪಡೆಯಬೇಕಿತ್ತು. ಸಮಾಜದ ಒಳಿತನ್ನು ಕುರಿತು ಸದಾ ಚಿಂತನೆ ಮತ್ತು ಸತ್ಯದ

ದರ್ಶನ ಮಾಡಿಕೊಳ್ಳಲು ಅವಕಾಶ. ಒಟ್ಟಾರೆ, ಶಿಕ್ಷಣದ ಧ್ಯೇಯ ವ್ಯಕ್ತಿಯಲ್ಲಿ ಒಂದು ವಿಶೇಷವಾದ "ಗುಣ" (quality), ಮತ್ತು ಅವಶ್ಯ ಕಲ್ಪನೆಗಳು ಅಥವಾ ದಿವ್ಯದರ್ಶನ (divine-vision) ಪಡೆಯುವುದಾಗಿತ್ತು. ಉನ್ನತ ಶಿಕ್ಷಣದ ಅಭ್ಯರ್ಥಿಗಳಾದವರು ಇವುಗಳನ್ನು ಸಾಕ್ಷಾತ್ಕರಿಸಿಕೊಳ್ಳಬೇಕಿತ್ತು. ಇಂತಹ ಒಂದು ಅರ್ಹತೆಯನ್ನು ಗಳಿಸಿಕೊಳ್ಳದೇ ಹೋದರೆ ಉನ್ನತ ಅಧಿಕಾರಿಗಳಾಗಲು ಅಸಮರ್ಥರೆಂದು ಭಾವಿಸಲಾಗುವುದು. ಸಾಮಾನ್ಯರಿಗೆ ಉನ್ನತ ಹುದ್ದೆ ಮತ್ತು ಶಿಕ್ಷಣ ಅಲಭ್ಯ. ಆಡಳಿತ-ಅಧಿಕಾರ ಇತ್ಯಾದಿಗಳ ಹತ್ತಿರಕ್ಕೂ ಸುಳಿಯುವಂತಿಲ್ಲ. ಇದನ್ನು ಗಮನಿಸಿದರೆ ಒಂದು ವಿಷಯ ಸ್ಪಷ್ಟ. ವ್ಯಕ್ತಿಯ ಸ್ವಭಾವ "ಶೀಲ" ಮತ್ತು "ಸಾಮರ್ಥ್ಯ"ಗಳ ಆಧಾರದ ಮೇಲೆ ವ್ಯಕ್ತಿಗಳನ್ನು ಆಯಾ ವರ್ಗಕ್ಕನುಗುಣವಾಗಿ ಸೂಕ್ತವಾದ ವಿದ್ಯಾಭ್ಯಾಸವನ್ನು ಕೊಡಿಸುವುದಾಗಿತ್ತು. ಅಂದರೆ ವ್ಯಕ್ತಿ ಸ್ವೀಕರಿಸುವ ಶಿಕ್ಷಣಕ್ಕೂ, ಅವನು ನಿರ್ವಹಿಸುವ ಕೆಲಸಕ್ಕೂ ಹೊಂದಾಣಿಕೆ ಇರತಕ್ಕದ್ದು. ವರ್ಗ ವ್ಯವಸ್ಥೆಯನ್ನು ದೃಷ್ಟಿಯಲ್ಲಿರಿಸಿಕೊಂಡು ಪ್ರಜೆಗಳಿಗೆ ಶಿಕ್ಷಣ ಕೊಡಿಸಬೇಕೆಂಬುದು ಪ್ಲೇಟೋನ ಅಭಿಪ್ರಾಯ.

ವ್ಯಕ್ತಿ ಗಳಿಸುವ ಶಿಕ್ಷಣಕ್ಕೂ ಅವನು ಅವಲಂಬಿಸುವ ಕಸುಬಿಗೂ ತಾಳಮೇಳವಿರತಕ್ಕದ್ದು. ಅಂತಹ ವ್ಯವಸ್ಥೆ ಇಂದು ಇಲ್ಲದುದರ ದೆಸೆಯಿಂದ ಸಮಾಜದಲ್ಲಿ ಹಲವು ಅನಿಷ್ಟಗಳನ್ನು ಎದುರಿಸುತ್ತಿದ್ದೇವೆ. ಸ್ವತಂತ್ರ ಭಾರತದಲ್ಲಿ ಒಂದೆಡೆ ನಿರುದ್ಯೋಗ ಹೆಚ್ಚುತ್ತಲಿದೆ, ಮತ್ತೊಂದೆಡೆ ಆಡಳಿತದಲ್ಲಿ ದಕ್ಷತೆ ಕ್ಷೀಣಿಸು-

ತ್ತಲಿದೆ. ಕಾರಣ, ವೃತ್ತಿ ಮತ್ತು ಶಿಕ್ಷಣಗಳಲ್ಲಿ ಹೊಂದಾಣಿಕೆ ಅವಶ್ಯ.

ಒಟ್ಟಾರೆ, ವ್ಯಕ್ತಿಯ ಸಮಗ್ರ ವಿಕಾಸವೇ ಶಿಕ್ಷಣದ ಗುರಿ. ಮೈಮನಗಳೆರಡೂ ಹದಗೊಳ್ಳಬೇಕು. ವ್ಯಾಯಾಮ ಮತ್ತು ಕ್ರೀಡೆಗಳ ಮೂಲಕ ಸರ್ವಾಂಗ ಸುಂದರ ಅಂಗ ಸೌಷ್ಟವವನ್ನು ಉಳಿಸಿಕೊಂಡರೆ ಸಾಲದು. ಜೊತೆಗೆ ಬುದ್ಧಿ ಬೆಳೆಯಬೇಕು. ಬೌದ್ಧಿಕ ಮತ್ತು ಮಾನಸಿಕ ವಿಕಾಸದಲ್ಲಿ ಸಮತೋಲನವಿರಬೇಕೆಂಬುದು ಗ್ರೀಕರ ಅಭಿಪ್ರಾಯವಾಗಿತ್ತು. ಹಾಗೆಂದೇ "ಸಶಕ್ತ ಶರೀರದಲ್ಲಿ ಸುಸ್ಥಿರ ಹಾಗೂ ಸಮರ್ಥ ಮನಸ್ಸು" (a sound mind in a sound body) ಎಂಬುದು ಅವರ ಆದರ್ಶ. ದೇಹ ಮತ್ತು ಮನಸ್ಸಿನ ವಿಕಾಸದ ಜೊತೆಗೆ ಆತ್ಮ ವಿಕಾಸಕ್ಕೂ ಅವಕಾಶಬೇಕು. ಈ ದೆಸೆಯಲ್ಲಿ ಸಂಗೀತ ಅಭ್ಯಾಸ ಮೂಲ ಸಾಧನ. ಕಲೆ, ಸಾಹಿತ್ಯ ಇತ್ಯಾದಿ ಪ್ರಾಕಾರಗಳು ಪೂರಕ. ಇವು ವ್ಯಕ್ತಿಯಲ್ಲಿ ಪಶು ಸದೃಶ್ಯ ಗುಣಗಳನ್ನು ಹೋಗಲಾಡಿಸಿ,ಸೌಮ್ಯ ಹಾಗೂ ಸಂಪನ್ನನನ್ನಾಗಿ ಮಾರ್ಪಡಿಸುತ್ತವೆ. ಇದಿಷ್ಟು ಶಿಕ್ಷಣದ ಬಗ್ಗೆ ಪ್ಲೇಟೋನ ಅನಿಸಿಕೆಗಳು.

## ಶಿಕ್ಷಣ ಮತ್ತು ಸ್ತ್ರೀ

ಗ್ರೀಕರು ಸ್ತ್ರೀಯರಿಗೆ ಸಮಾನತೆಯನ್ನು ಮಾನ್ಯತೆ ಮಾಡಿರಲಿಲ್ಲ. ಅವರ ಚಟುವಟಿಕೆಗಳೇನಿದ್ದರೂ ಗೃಹಕೃತ್ಯಕ್ಕೇ ಸೀಮಿತ. ಆದರೆ ಪ್ಲೇಟೋನ ಆದರ್ಶ ರಾಜ್ಯ ವ್ಯವಸ್ಥೆಯಲ್ಲಿ ಅವರು ಪುರುಷರೊಂದಿಗೆ ಎಲ್ಲ ರೀತಿಯಲ್ಲಿ ಸಮಾನರು. ಶಿಕ್ಷಣದಲ್ಲಿ ಗಂಡು ಹೆಣ್ಣುಗಳೆಂಬ ಭೇದವಿಲ್ಲ. ಹೆಣ್ಣೆಂದ ಕೂಡಲೇ

ದೈಹಿಕ ಹಾಗೂ ಮಾನಸಿಕವಾಗಿ ದುರ್ಬಲಳೆಂದು ಭಾವಿಸು ವುದು ತಪ್ಪು. ಸ್ತ್ರೀಯರು ಎಲ್ಲ ವಿಷಯಗಳಲ್ಲಿ ಸ್ವತಂತ್ರರು. ತಮಗೆ ಅಭಿರುಚಿ ಇರುವ ಕೆಲಸ ಕಾರ್ಯಗಳಲ್ಲಿ ತೊಡಗ ಬಹುದು. ಯಾವ ವಿದ್ಯೆಯನ್ನಾದರೂ ಕಲಿಯಬಹುದು. ಮತ್ತೆ ಅಲ್ಲಿ ಸಮಾಜದ ಕೆಲಸ ಕಾರ್ಯಗಳನ್ನು ಲಿಂಗಬೇಧಕ್ಕನುಸಾರ ವಾಗಿ ವಿಂಗಡಿಸಿರುವುದಿಲ್ಲ. ಎಂದ ಮೇಲೆ, ಸ್ತ್ರೀಯರು ಇಚ್ಛಿಸಿ ದರೆ ಪುರುಷರಂತೆ ಯೋಧರಾಗಬಹುದು, ಅಧಿಕಾರಿಗಳಾಗ ಬಹುದು ಅಥವಾ ರಾಜ್ಯಪಾಲರಾಗಿ ಆಡಳಿತ ನಿರ್ವಹಿಸಬಹುದು. ಸ್ತ್ರೀ ನಿಕೃಷ್ಟಳೆಂದಾಗಲೀ, ಪರಾಧೀನಳೆಂದಾಗಲೀ ಭಾವಿಸು ವುದು ಸಲ್ಲ. ಹೆಣ್ಣು ಜನಾಂಗದ ಅರ್ಧ ಶಕ್ತಿ. ಆ ಶಕ್ತಿಯನ್ನು ಸದುಪಯೋಗಪಡಿಸದೇ ಹೋದರೆ ಸಮಾಜಕ್ಕೆ ಕೇಡು. ಯಾರಲ್ಲಿ ದೇಶ ಸೇವೆ ಸಲ್ಲಿಸುವ ಯೋಗ್ಯತೆ ಇದೆಯೋ ಅವರು ತಮ್ಮ ಶಕ್ತಿ ಸಾಮರ್ಥ್ಯವನ್ನು ಸಮಾಜದ ಒಳಿತಿಗಾಗಿ ವಿನಿ-ಯೋಗಿಸಬಹುದು. ಇಲ್ಲಿ ಸಮಾಜೋನ್ನತಿ ಮುಖ್ಯವೇ ಹೊರತು, ವ್ಯಕ್ತಿ ಮುಖ್ಯವಲ್ಲ. ವ್ಯಕ್ತಿಯ ಗುಣ ಮತ್ತು ಕ್ರಿಯಾಶೀಲತೆ ಪ್ರಾಧಾನ್ಯ. ಇನ್ನುಳಿದವು ಗೌಣವೆಂದು ಪ್ಲೇಟೋ ವಾದಿಸುತ್ತಾನೆ. ಈ ಸಮಾನತೆಯ ತತ್ವ ಪ್ರತಿಪಾದ-ನೆಯಲ್ಲಿ ಅವನ ಪ್ರಗತಿಪರ ವಿಚಾರಧಾರೆಯನ್ನು ನಾವು ಸುಲಭ ವಾಗಿ ಗುರುತಿಸಬಹುದು. ಕಾಲದ ದೃಷ್ಟಿಯಿಂದ ಪ್ಲೇಟೋ ಸಾವಿರ, ಸಾವಿರ ವರ್ಷಗಳಷ್ಟು ಮುಂದಿದ್ದಾನೆ.

## ೧೪. ಸಮಾಜ ಕಲ್ಯಾಣ

ಯಾವುದೇ ಒಂದು ರಾಜ್ಯ ಆದರ್ಶವೆನ್ನಿಸಿಕೊಳ್ಳಬೇಕಾದರೆ ಹಲವು ನಿಟ್ಟಿನಲ್ಲಿ ಹಲವು ವ್ಯವಸ್ಥೆಗಳಾಗಬೇಕು. ಸಮಾಜ ಕಲ್ಯಾಣ ಸಾಧನೆ ಸುಲಭವಲ್ಲ. ಒಂದೆಡೆ ಸಾಮಾಜಿಕ, ಆರ್ಥಿಕ, ರಾಜಕೀಯ ಇತ್ಯಾದಿ ಕ್ಷೇತ್ರಗಳಲ್ಲಿ ಅಪಾರ ಪ್ರಗತಿ ಸಾಧನೆಯಾದರೆ, ಮತ್ತೊಂದೆಡೆ ಪ್ರಜೆ ಪ್ರಭುಗಳೀರ್ವರೂ ನಿರ್ದಿಷ್ಟ ನೀತಿ-ನಿಯಮ ಪಾಲಿಸುವ ವ್ಯವಸ್ಥೆ ಏರ್ಪಡತಕ್ಕದ್ದು. ಈ ದಿಸೆಯಲ್ಲಿ ಆಲೋಚಿಸಿದಾಗ ಹೇಗಾದರೆ ಜನತೆಯ ಅಭ್ಯುದಯ ಸಾಧ್ಯ? ಯಾವ ವ್ಯವಸ್ಥೆಯ ಮೂಲಕ ಸಮಾಜದಲ್ಲಿ ಶಾಂತಿ, ಸುವ್ಯವಸ್ಥೆ, ಸಮೃದ್ಧಿ, ಮತ್ತು ಐಕ್ಯತೆ ನೆಲೆಗೊಳ್ಳುವವು? ಇವೇ ಇತ್ಯಾದಿ ಸಮಸ್ಯೆಗಳು ಪ್ಲೇಟೋನ ಗಮನ ಸೆಳೆದುವು. ಈ ಸಮಸ್ಯೆಗಳನ್ನು ಕುರಿತು ಬಹು ಗಂಭೀರವಾಗಿ ಚಿಂತಿಸಿ, ಒಂದೊಂದು ಸಮಸ್ಯೆಗೂ ಸೂಕ್ತ ನಿವಾರಣೋಪಾಯಗಳನ್ನು ಸೂಚಿಸಿದ್ದಾನೆ.

ಸಮಾಜದಲ್ಲಿ ಪ್ರಜೆಗಳಿಗೆ ಸಾಮಾಜಿಕ ಮತ್ತು ಆರ್ಥಿಕ ನ್ಯಾಯ ಅವಶ್ಯ ಒದಗಿಸುವ ವ್ಯವಸ್ಥೆ ಏರ್ಪಡತಕ್ಕದ್ದು. ಅದಿಲ್ಲದೆ ಆದರ್ಶ ರಾಜ್ಯವೆನಿಸದು. ಬಡತನ, ದಾರಿದ್ರ್ಯ, ಅಸಮಾನತೆ, ಅಸಂತೋಷ ಇತ್ಯಾದಿ ಅನಿಷ್ಟಗಳು ಸಮಾಜದಲ್ಲಿ ಇಣುಕಿ ಹಾಕಲು ಅವಕಾಶ ಇರಕೂಡದು. ಇವುಗಳ ಶೀಘ್ರ ಉಚ್ಚಾಟನೆಯಾದಷ್ಟೂ ಸಮಾಜಕ್ಕೆ ಕ್ಷೇಮ. ಆರ್ಥಿಕ ವಿಷಮತೆ ಎಂಬುದು ಸಮಾಜದ ಪಿಡುಗು. ಶೋಷಣೆಯ ಮೂಲ. ಸಂಪತ್ತು ಕೇವಲ ಕೆಲವೇ ಜನರ ಕೈಯಲ್ಲಿ ಕೇಂದ್ರೀಕೃತವಾಗಿರ

ಕೂಡದು. ಶ್ರೀಮಂತ ಬಡವರ ಮಧ್ಯೆ ಸಂಪತ್ತಿನ ಸಮಾನ ಹಂಚಿಕೆಯಾಗದ ಹೊರತು ಅಸಂತೋಷ, ಅತೃಪ್ತಿ ತಪ್ಪಿದ್ದಲ್ಲ, ಉದಾಸೀನ ಮಾಡಿದಷ್ಟೂ ದೇಶಕ್ಕೆ ಕೇಡು ಶತಸಿದ್ಧ. ಇದ್ದಕ್ಕಿದ್ದಂತೆ ಒಂದು ದೇಶದಲ್ಲಿ ಕ್ರಾಂತಿಯಾಗಿ ಆಡಳಿತ ಕುಸಿದು ಬೀಳುವುದೂ ಇದೇ ಕಾರಣದಿಂದ. ಆದಕಾರಣ ಸಮಾಜದ ವಿವಿಧ ವರ್ಗಗಳಲ್ಲಿ ಆರ್ಥಿಕ ಸಮತೋಲನ ಏರ್ಪಡುವುದು ಅವಶ್ಯ.

ಇಷ್ಟಾದರೆ ಸಾಲದು. ಸಮಾಜದಲ್ಲಿ ಸಾಮರಸ್ಯ ಮೂಡಿ ಬರಬೇಕು. ಪ್ರಜೆಗಳು ದ್ವೇಷ, ಅಸೂಯೆಗಳನ್ನು ತೊರೆದು ಪರಸ್ಪರ ಸ್ನೇಹ, ಸಹಕಾರ ಮತ್ತು ಸೌಹಾರ್ದದಿಂದ ಜೀವಿಸತಕ್ಕದ್ದು. ಅವರು ಅನ್ಯೋನ್ಯವಾಗಿ ಜೀವಿಸಿದಷ್ಟೂ ಸಹಜ ಮೈತ್ರಿ ಬೆಳೆದು ದೇಶದಲ್ಲಿ ಐಕ್ಯತೆ ಬಲಗೊಳ್ಳುತ್ತದೆ. ಐಕ್ಯತೆ ಪ್ರಗತಿಯ ಸಂಕೇತ. ಜನರ ಸಹಜ ಮೈತ್ರಿಯ ಬಗ್ಗೆ ಪ್ಲೇಟೋ ಒಂದು ಸೊಗಸಾದ ಸಾದೃಶ್ಯ ಕೊಡುತ್ತಾನೆ. ಸಂಗೀತದಲ್ಲಿ ವಿವಿಧ ಸ್ವರಗಳು ಒಂದು ಗತಿಯಲ್ಲಿ ಮೇಳೈಸಿದಾಗ ಸ್ವರ ಮಾಧುರ್ಯ ಶ್ರೋತೃಗಳನ್ನು ಆನಂದ ಪಡಿಸುವಂತೆ, ಸಮಾಜದ ಭಿನ್ನ ಭಿನ್ನ ವರ್ಗದ ಜನರಲ್ಲಿ ಮೈತ್ರಿಯ ತಳಹದಿಯ ಮೇಲೆ ಪರಸ್ಪರ ಹೊಂದಾಣಿಕೆಯಾಗಬೇಕು. ಅಂದರೆ ಸಂಗೀತದಲ್ಲಿಯ "ಸ್ವರಮೈತ್ರಿ" ಯಂತೆ ಸಮಾಜದಲ್ಲಿ ಸಾಂಗತ್ಯ ಸಾಮರಸ್ಯ ಏರ್ಪಡತಕ್ಕದ್ದು. "ಸಾಮರಸ್ಯ" ಎಂದರೆ ಪ್ಲೇಟೋವಿನದೇ ಬೇರೆ ಅನಿಸಿಕೆ. ಅವನ ಪ್ರಕಾರ ಪ್ರತಿಯೊಬ್ಬ ಪ್ರಜೆ ತನ್ನ "ಸ್ವಭಾವ", "ಅಭಿರುಚಿ", ಸಾಮರ್ಥ್ಯ ಅಥವಾ

ಯೋಗ್ಯತೆಗಳಿಗನುಗುಣವಾದ ವೃತ್ತಿ ಅಥವಾ ಕಸಬನ್ನು ಅವ ಲಂಬಿಸತಕ್ಕದ್ದು. ಜೊತೆಗೆ ಕೆಲಸದಲ್ಲಿ ಪರಿಣತಿ ಅಥವಾ ನೈಪುಣವಿರಬೇಕು. ಆದಿಲ್ಲದೆ ಅನ್ಯರ ಕಸಬಿಗೆ ಕೈಹಾಕುವು ದೆಂದರೆ ಘಾತುಕದ ಕೆಲಸ. ಸಾಮರಸ್ಯಕ್ಕೆ ಚ್ಯುತಿ. ಉದಾಹ-ರಣೆಗೆ ಕ್ಷೌರಿಕನು ಕ್ಷೌರ ಮಾಡುವುದದಲ್ಲಿ ಚಾಣಾಕ್ಷನಾಗದೆ ಯುದ್ಧಕ್ಕೆ ಕತ್ತಿ ಹಿರಿದರೆ ಹೇಗೆ? ಎಂದಾದರೂ ಸಮಂಜಸ ವಾದೀತೇ? ತರುವಾಯ ಕೆಲಸದಲ್ಲಿ ನಿಷ್ಠೆಬೇಕು. ಪ್ರಜೆ ತನಗೆ ವಹಿಸಿದ ಕಾರ್ಯವನ್ನು ಶ್ರದ್ಧೆ ಇಲ್ಲದೆ ಹೋದರೆ ಕಾಯಕ ಕೈಲಾಸವಾಗದು. ಇದು ಆದರ್ಶ ರಾಜ್ಯದ ಸ್ಥೂಲ ವ್ಯವಸ್ಥೆ.

## ೧೫. ಆಳುವವರ ಯೋಗ್ಯತೆ

ರಾಜ್ಯ, ಸರಕಾರ, ಆಡಳಿತ, ಅಧಿಕಾರ ಇತ್ಯಾದಿಗಳು ಕಣ್ಣಿಗೆ ಗೋಚರಿಸುವ ವಸ್ತುಗಳಲ್ಲ. ಆದಾಗ್ಯೂ ಸಾರ್ವಜನಿಕ ವ್ಯವಸ್ಥೆಯಲ್ಲಿ ಅವುಗಳ ಪಾತ್ರ ಗುರುತರ ಎಂಬುದು ಸರ್ವ ವಿದಿತ. ಇವುಗಳಲ್ಲಿ ಅಧಿಕಾರ ದೊಡ್ಡದು. ಸಮಗ್ರ ಜೀವನ ವನ್ನು ನಿಯಂತ್ರಿಸುವ ಶಕ್ತಿ ಅದಕ್ಕುಂಟು. ಬದುಕಿನಲ್ಲಿ ಆದರ ಹತೋಟಿಗೆ ಒಳಪಡದ ವಸ್ತುವಿಷಯಗಳಿಲ್ಲ. ಎಂತಲೇ ಅದನ್ನು ಕುರಿತು ರಾಜ್ಯಶಾಸ್ತ್ರದಲ್ಲಿ ಹಲವು ಸಿದ್ಧಾಂತಗಳುರೂಪಿತ. ಅಧಿಕಾರ ಮತ್ತು ಅದನ್ನು ಚಲಾಯಿಸುವ ವಿಧಿವಿಧಾ ನಗಳನ್ನು ಆಧರಿಸಿ ರಾಜ್ಯಾಂಗ ರಚನೆ ಮಾಡಲಾಗುವುದು.

ರಾಜ್ಯಾಂಗದ ಮೂಲಉದ್ದೇಶ ಆಡಳಿತ ನಿರ್ವಹಣೆ. ಇದು ಸರಕಾರದ ಮೂಲಕ ಸಾಧ್ಯತಾನೆ? ಇಷ್ಟು ಮಾತ್ರ. ನಿಜ. ಸರಕಾರ ಸಮರ್ಪಕವಾಗಿ ಕೆಲಸ ನಿರ್ವಹಿಸಿದರೆ ಮಾತ್ರ ಜನತೆಯ ಆಶೋತ್ತರಗಳು ಈಡೇರುತ್ತವೆ. ದಕ್ಷ ಸರಕಾರಕ್ಕೂ, ಅಧಿಕಾರ ನಿರ್ವಹಿಸುವ ರೀತಿ ನೀತಿಗೂ ನಿಕಟ ಸಂಬಂಧವೆಂದಾಯಿತು. ಅಂದರೆ ಸರ್ಕಾರದಲ್ಲಿ ಆಡಳಿತ ಸೂತ್ರ ಹಿಡಿದು ಅಧಿಕಾರ ಚಲಾಯಿಸುವ ವ್ಯಕ್ತಿಗಳು ಮುಖ್ಯ. ಅವರನ್ನು ಯಾವುದೇ ರೀತಿಯಲ್ಲಿ ಉಪೇಕ್ಷೆಮಾಡುವಂತಿಲ್ಲ. ಏಕೆಂದರೆ ಸಮಸ್ತ ಬದುಕು ಅವರನ್ನೇ ಅವಲಂಬಿಸಿರುತ್ತದೆ. ಇದು ಸ್ಪಷ್ಟ ಕಾರಣ. ಅಧಿಕಾರ ಚಲಾಯಿಸುವವರು ಸಮರ್ಥರಾಗಿರತಕ್ಕದ್ದು. ಅಸಮರ್ಥರು ಅಧಿಕಾರಕ್ಕೆ ಬೇಗ ಬಂದರೆ ಸಮಾಜಕ್ಕೆ ಕೇಡು. ಜನಜೀವನ ದುರ್ಬರ. ಸಾಮಾನ್ಯವಾಗಿ ಅಧಿಕಾರ ಬೇಗ ದುರುಪಯೋಗವಾಗುತ್ತದೆ. ಹಾಗೆ ದುರುಪಯೋಗವಾದಾಗಲೆಲ್ಲಾ ವ್ಯಕ್ತಿಸ್ವಾತಂತ್ರ್ಯ ಹರಣವಾಗುವುದು. ಕಾರಣ ಆಳುವವರು ಯೋಗ್ಯರೂ, ಸಮರ್ಥರೂ ಆಗಿರತಕ್ಕದ್ದು. ಅವರನ್ನುಳಿದು ಸುಖೀರಾಜ್ಯ ಅಥವಾ ಸುಖೀ ಜೀವನದ ಕಲ್ಪನೆ ಅಸಾಧ್ಯ. ಹಾಗಾದರೆ ಅಂಥವರು ಯಾರು? ಅವರನ್ನು ಹೇಗೆ ಆಯ್ಕೆಮಾಡತಕ್ಕದ್ದು? ಅವರ ಜೀವನ ಕ್ರಮಗಳೇನು? ಅವರಿಗಿರುವ ಅಧಿಕಾರ ಹೊಣೆಗಾರಿಕೆಗಳಾವವು? ಇವೇ ಮುಂತಾದ ವಿಷಯಗಳನ್ನು ಪ್ಲೇಟೋ ಮನೋಜ್ಞವಾಗಿ ಚಿಂತಿಸಿದ್ದಾನೆ.

# ೧೬. ಮುಖಂಡರ ಆಯ್ಕೆ

ಸಮಾಜದಲ್ಲಿ ವ್ಯಕ್ತಿಗಳು ಒಂದೇ ತೆರನಾಗಿರುವುದಿಲ್ಲ. ಒಬ್ಬನಿದ್ದಂತೆ ಇನ್ನೊಬ್ಬನಿಲ್ಲ. ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆ ಇದ್ದೇ ಇದೆ. ವಸ್ತುಗಳಲ್ಲಿ ಉಚ್ಚ-ನೀಚವನ್ನು ಕಲ್ಪಿಸುವಂತೆ ವ್ಯಕ್ತಿಗಳಲ್ಲಿ ಭಿನ್ನತೆ ಸಹಜ. ತೋರಿಕೆಯಲ್ಲಿ ಎಲ್ಲರೂ ಒಂದೇ ವಿಧವಾಗಿ ಕಂಡರೂ, ಬುದ್ಧಿ, ಗುಣ ಅಥವಾ ಸ್ವಭಾವ ಮತ್ತು ಕೌಶಲ್ಯ ಇತ್ಯಾದಿಗಳಲ್ಲಿ ಸಮಾನರಲ್ಲ. ಅಸಮಾನತೆ ಸ್ವಾಭಾವಿಕ. ಹಾಗೆಂದೇ ಮನುಷ್ಯರನ್ನು ಉತ್ತಮ, ಮಧ್ಯಮ ಹಾಗೂ ಸಾಮಾನ್ಯರೆಂದು ವಿಂಗಡಿಸಲಾಗುವುದು. ಅದರಲ್ಲೂ ಆಳುವ ಕಾರ್ಯಕ್ಕೆ ಅತಿ ಉತ್ತಮರನ್ನೇ ಆಯ್ಕೆಮಾಡತಕ್ಕದ್ದೆಂದು ಪ್ಲೇಟೋ ಸೂಚಿಸುತ್ತಾನೆ. ಅಷ್ಟೇ ಅಲ್ಲ ಅವರ ಆಯ್ಕೆ ಬಹು ಎಚ್ಚರಿಕೆಯಿಂದ ಕೂಡಿರತಕ್ಕದ್ದು. ಆಯ್ಕೆಯಲ್ಲಿ ಕೊಂಚ ಅಚಾತುರ್ಯವಾದರೆ ರಾಜ್ಯಕ್ಕೆ ಕೇಡು ತಪ್ಪಿದ್ದಲ್ಲ. ಹಾಗಾದರೆ ಅಂಥವರು ಯಾರು ? ಅವರ ಅರ್ಹತೆಗಳೇನು ? ಈ ಮೊದಲು ವಿವರಿಸಿದಂತೆ "ಬಂಗಾರ" ದಂತಹ ಸಾತ್ವಿಕ ಗುಣ ಪೂರ್ಣರೇ ಆಳುವ ಕಾರ್ಯಕ್ಕೆ ಯೋಗ್ಯರೆಂದು ನಿರ್ಣಯಿಸುತ್ತಾನೆ. ಅಂಥವರು ಕೆಲವು ಉತ್ಕೃಷ್ಟ ಗುಣಗಳನ್ನು ಹೊಂದಿರತಕ್ಕದ್ದು. ಪ್ಲೇಟೋ ಅಭಿಪ್ರಾಯದಂತೆ ಧೈರ್ಯ, ಸ್ಥೈರ್ಯ, ವಿವೇಕ ಅಪಾರ ಬುದ್ಧಿಮತ್ತೆ ಇರುವ ಸದಾ ಜ್ಞಾನ ಪಿಪಾಸುಗಳಾಗಿರುವ ಸದ್ಗುಣಿಗಳೇ ಮೂರ್ತಿಮತ್ತಾಗಿರುವ ಹಾಗೂ ದೇಶಸೇವೆಯೇ ಪರಮ ಧ್ಯೇಯವಾಗಿರಿಸಿಕೊಂಡ ಅವಕ್ಕೋಸ್ಕರ ತಮ್ಮನ್ನು ಸಮರ್ಪಿಸಿಕೊಂಡ ಸರ್ವೋತ್ತಮರೇ ರಾಜ್ಯಪಾಲಕರಾಗತಕ್ಕದ್ದು.

## ೧೬. ರಾಜ್ಯಭಾರ ಒಂದು ಕಲೆ

ಇಷ್ಟೆಲ್ಲಾ ವಿಶೇಷ ಗುಣಗಳು ಆಳುವವರಲ್ಲಿ ಇರತಕ್ಕದ್ದೆಂದು ನಿರೀಕ್ಷಿಸುವುದು ಸಹಜ. ಏಕೆಂದರೆ ರಾಜ್ಯಭಾರ ಕ್ರಮ ಅಷ್ಟೊಂದು ಸರಳವಲ್ಲ. ಬಹು ಕ್ಲಿಷ್ಟವಾದುದು. ಕಂಡವರು ಅಧಿಕಾರ ಸೂತ್ರ ಹಿಡಿಯುವುದೆಂದರೆ ತಪ್ಪು. ಅಪಾಯಕಾರಿ. ಆಳುವವರಲ್ಲಿ ಕೆಲವು ಅರ್ಹತೆಗಳು ಅವಶ್ಯ ಇರಲೇಬೇಕು. ಸೂಕ್ತವಾದ ಶಿಕ್ಷಣ, ಅನುಭವ, ಅಗಾಧ ಬುದ್ಧಿಮತ್ತೆ, ಆಡಳಿತ ನಿರ್ವಹಿಸುವ ನೈಪುಣ್ಯ, ಮತ್ತು ಪರಿಶ್ರಮ ಇತ್ಯಾದಿಗಳು ಅವಶ್ಯ. ಯಾವುದೇ ಕೆಲಸ ನಿರ್ವಹಿಸಬೇಕಾದರೂ ಆ ಕೆಲಸದ ಬಗ್ಗೆ ತಾಂತ್ರಿಕ ಪರಿಜ್ಞಾನ (Technical skill) ಅಥವಾ ತಾಂತ್ರಿಕ ಕೌಶಲ್ಯ ಇರತಕ್ಕದ್ದು. ವೈದ್ಯನು ವೈದ್ಯ ಶಾಸ್ತ್ರದಲ್ಲಿ ಸೂಕ್ತ ಶಿಕ್ಷಣದ ಮೂಲಕ ಪರಿಣತೆಯನ್ನು ಪಡೆದಿರಬೇಕು ಎಂದು ನಿರೀಕ್ಷಿಸುತ್ತೇವೆ. ಅದೇ ರೀತಿ ಒಬ್ಬ ವಾಸ್ತುಶಿಲ್ಪಿ ಕಟ್ಟಡ ರಚನೆ ಇತ್ಯಾದಿ ವಿಷಯಗಳಲ್ಲಿ ತಾಂತ್ರಿಕ ಪರಿಜ್ಞಾನವನ್ನು ಪಡೆದಿರಬೇಕೆಂದು ಅಪೇಕ್ಷಿಸುತ್ತೇವೆ. ಆದರೆ ಈ ಎಲ್ಲ ಕೆಲಸಗಳಿಗಿಂತ ಎಷ್ಟೋಪಾಲು ಕಷ್ಟಕರವಾದ ರಾಜ್ಯದ ಆಡಳಿತ ನಿರ್ವಹಿಸುವ ರಾಜ್ಯಭಾರ ಕ್ರಮಕ್ಕೆ ಯಾವ ತಾಂತ್ರಿಕ ನೈಪುಣ್ಯ ತರಬೇತು ಅಥವಾ ಪರಿಶ್ರಮ ಬೇಡವೆಂದರೆ ಹೇಗೆ ? ಹಾಸ್ಯಾಸ್ಪದವಲ್ಲವೇ ? ಇದು ಪ್ಲೇಟೋಗೆ ಆಶ್ಚರ್ಯವಾಗಿ ಕಂಡಿತು. ಕಾರಣ ಆಳುವ ರಾಜ್ಯಪಾಲಕರು ಸೂಕ್ತ ಶಿಕ್ಷಣ, ಅನುಭವ, ಪ್ರಾಮಾಣಿಕತೆ, ಪರಿಶ್ರಮ ಇತ್ಯಾದಿ ಅರ್ಹತೆಗಳನ್ನು ಅವಶ್ಯ

ಪಡೆದಿರಬೇಕೆಂದು ತೀರ್ಮಾನಿಸುತ್ತಾನೆ.

ಈ ಹೇಳಿಕೆಯ ಅಂತರ್ಯವಿಷ್ಟೆ. ಸಾರ್ವಜನಿಕ ಜೀವನದಲ್ಲಿ ಮುಖಂಡರ ಪಾತ್ರ ಹಿರಿದು. ಸಮಾಜದ ಅಭ್ಯುದಯ ಅಥವಾ ಅವನತಿ ಅವರನ್ನೇ ಅವಲಂಬಿಸಿರುತ್ತದೆ. ಅಂದರೆ ಅವರು ಹೆಚ್ಚಿನ ಚೈತನ್ಯಶಾಲಿಗಳಾಗಿರಬೇಕು. ಕೆಲವು ಉತ್ಕೃಷ್ಟ ಗುಣಗಳು ಜನ್ಮತಃ ಬಂದಿರತಕ್ಕದ್ದು. ಜನತೆಯನ್ನು ಅಜ್ಞಾನದ ಕತ್ತಲೆಯಿಂದ ಬೆಳಕಿನತ್ತ ಕೊಂಡೊಯ್ಯುವ ಕಟ್ಟಾಳುಗಳಾಗಿರಬೇಕು. ಕಠಿಣ ಶಿಕ್ಷಣ ಪೂರೈಸಿದ, ಅನುಭವಸ್ಥ, ಸಕಲವಿದ್ಯಾಪಾರಂಗತರಾದ, ಸದಾ ಜನತೆಯ ಯೋಗಕ್ಷೇಮವನ್ನು ಕುರಿತು ಚಿಂತಿಸುವ ಹಾಗೂ ಅವರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸುವ ಹಿರಿಗುಣವುಳ್ಳವರೇ ರಾಜ್ಯ ಪಾಲಕರಾಗತಕ್ಕದ್ದೆಂದು ಪ್ಲೇಟೋ ಸೂಚಿಸುತ್ತಾನೆ.

## ೧೮ ರಾಜರ್ಷಿಗಳು

ರಾಜ್ಯದ ಸಮಗ್ರ ಆಡಳಿತ ಸೂತ್ರಗಳನ್ನು ಹಿಡಿದ ಅತ್ಯಂತ ಶ್ರೇಷ್ಠವರ್ಗದ ಮುತ್ಸದ್ದಿಗಳೇ ರಾಜರ್ಷಿಗಳು (Philosopher kings) ಎಂದು ಪ್ಲೇಟೋ ತೀರ್ಮಾನಿಸುತ್ತಾನೆ. ಅವರ ಯೋಗ್ಯತೆ, ಶಿಕ್ಷಣ, ಗುಣ, ಧರ್ಮ ಇತ್ಯಾದಿ ವಿಷಯಗಳನ್ನು ಕುರಿತು ಮನೋಜ್ಞ ನಿರೂಪಣೆ "ರಿಪಬ್ಲಿಕ್" ಗ್ರಂಥದಲ್ಲಿ ಮೂಡಿ ಬಂದಿದೆ. ರಾಜರ್ಷಿಗಳ ವಿಷಯ ಗ್ರಂಥದಲ್ಲಿಯೇ ಒಂದು ಆಸಕ್ತಪೂರ್ಣ ಅಧ್ಯಾಯ. ಆದರ್ಶರಾಜ್ಯದ ಉನ್ನತ

ಅಧಿಕಾರಿಗಳಿಂದ ಮೇಲೆ ರಾಜರ್ಷಿಗಳ ಸ್ಥಾನ ಬಹು ಉನ್ನತ ವಾದುದು. ಅವರದು ವರ್ಣಮಯ ವ್ಯಕ್ತಿತ್ವ. ಅದನ್ನು ಕುರಿತು ಪ್ಲೇಟೋ ಬಹು ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಆ ವ್ಯಕ್ತಿ ಚಿತ್ರಣ (portrayal) ದ ಬೆಡಗು ಬಿನ್ನಾಣ ಮೆಚ್ಚು ವಂತಹದು. ಆ ಭಾವ ವೈಭವವೇನು ? ಕಲ್ಪನಾ ವಿಲಾಸ ವೇನು ? ವಿಚಾರ ಪ್ರಚೋದನಾತ್ಮಕ ವಿಷಯ ಪ್ರತಿಪಾದನೆ ಏನು ? ಒಂದೊಂದೂ ವೈಶಿಷ್ಟ್ಯಪೂರ್ಣ ! ಇಲ್ಲಿ ಒಂದು ವಿಷಯ ಗಮನಾರ್ಹ. ಪ್ರತಿಯೊಂದು ವಸ್ತು ವಿಷಯಗಳ ಲ್ಲಿಯೂ ಪರಿಪೂರ್ಣತೆಯನ್ನು ಕಾಣಬೇಕೆಂಬುದೇ ಪ್ಲೇಟೋನ ಹಂಬಲ. ಯಾವುದೋ ಒಂದು ವಿಷಯ ವಾಸ್ತವಿಕವೆಂದು ಕಂಡುಬಂದರೆ, ಆ ವಿಷಯಕ್ಕೆ ಆದರ್ಶದ ಮೆರಗನ್ನು ಬಹು ಒಪ್ಪವಾಗಿ ಬಳಿಯುವ ನೈಪುಣ್ಯ ಕಲಾತ್ಮಕವಾದುದು. ಈ ಕಲೆ ಪ್ಲೇಟೋಗೆ ಸಿದ್ಧಿಸಿದಂತೆ ಮತ್ತಾರಿಗೂ ಸಿದ್ಧಿಸಿಲ್ಲ. ಒಂದೊಂದು ಸಾರಿ ನಮ್ಮಿಂದ ಸಾಧಿಸಲಾಗದ ಆದರ್ಶ ಚಿತ್ರ ಗಳ ಭವ್ಯ ಲೋಕವನ್ನು ಸೃಷ್ಟಿಸಿ ನಮ್ಮನ್ನು ವಿಸ್ಮಯಗೊಳಿಸು ತ್ತಾನೆ. ಮುಗಿಲಾಚೆಯ ನಕ್ಷತ್ರಲೋಕಕ್ಕೂ ಕೈಚಾಚಿ ಅಲ್ಲಿರ ಬಹುದಾದ ಸುಖೀರಾಜ್ಯವನ್ನು ಈ ಲೋಕಕ್ಕೆ ಜಗ್ಗಿತರುವ ಭಗೀರಥ ಪ್ರಯತ್ನ ಕಂಡವರನ್ನು ದಂಗುಬಡಿಸುತ್ತದೆ. ಈ ಹಿನ್ನೆಲೆಯಲ್ಲಿ ವೀಕ್ಷಿಸಿದಾಗ. ಅವನಿಂದ ಸೃಷ್ಟಿಸಲ್ಪಟ್ಟ ರಾಜ ರ್ಷಿಗಳ ವ್ಯಕ್ತಿಚಿತ್ರಣ ನಿಜಕ್ಕೂ ಚೇತೋಹಾರಿ! ಹಲವು ಉದಾತ್ತ ಗುಣಗಳನ್ನು ಓರ್ವ ವ್ಯಕ್ತಿಯಲ್ಲಿ ಆರೋಪಿಸಿ,ಆದರ್ಶ ಸಾಕಾರ ಮೂರ್ತಿಯನ್ನು ನಮ್ಮೆದುರು ಕಡೆದು ನಿಲ್ಲಿಸುತ್ತಾನೆ.

"ದಾರ್ಶನಿಕ ದೊರೆ"ಗಳ ದರ್ಶನವಾಗುವುದೊಂದು ನಮ್ಮ ಪುಣ್ಯ! ಇದೊಂದು ರೋಮಾಂಚನಕಾರೀ ಅನುಭವ! ಪ್ಲೇಟೋನ ಪ್ರತಿಭಾ ಸಂಪನ್ನತೆಗೊಂದು ಅಪೂರ್ವ ನಿದರ್ಶನ!!

ಋಷಿಗಳು ಎಲ್ಲಿಯಾದರೂ ದೊರೆಗಳು ಅಥವಾ ಅರಸರಾಗಿರುವುದುಂಟೋ? ಯಾರಿಗಾದರೂ ಇದು ವಿಲಕ್ಷಣವಾಗಿ ತೋರದಿರುವುದೇ? ವಿರೋಧಾಭಾಸವಲ್ಲವೇ? ಇಂತಹ ಸಂದೇಹಾಸ್ಪದ ಪ್ರಶ್ನೆಗಳು ಉದ್ಭವಿಸುವುದು ಸಹಜ. ಆದರೆ ಪ್ಲೇಟೋನ ಆದರ್ಶ ರಾಜ್ಯದಲ್ಲಿ ಋಷಿಗಳು ದೊರೆಗಳಾಗಿ ತೋರುವುದು ಅಸ್ವಾಭಾವಿಕವಲ್ಲ. ಏಕೆಂದರೆ ರಾಜ್ಯದ ಕ್ಷೇಮಾಭ್ಯುದಯಕ್ಕೆ ಋಷಿಗಳಲ್ಲಿರುವ ಸಾತ್ವಿಕ ತೇಜಸ್ಸು ಮತ್ತು ಅರಸರುಗಳಲ್ಲಿರುವ ರಜೋಗುಣಗಳೆರಡೂ ರಾಜ್ಯಭಾರ ಮಾಡಲು ಅತಿ ಅವಶ್ಯವೆಂದು ಪ್ಲೇಟೋ ಭಾವಿಸುತ್ತಾನೆ. ಅಂದರೆ ಅರಸರಲ್ಲಿರುವ ಧೈರ್ಯ, ಸ್ಥೈರ್ಯ, ಕೆಚ್ಚು, ಕಲಿತನ ಮತ್ತು ಋಷಿಗಳಲ್ಲಿರುವ ಜ್ಞಾನ, ಸಂಯಮ, ತಾಪಸಿಕ ಶಕ್ತಿ ಅಥವಾ ಆಧ್ಯಾತ್ಮಿಕ ಚಿತ್ತವೃತ್ತಿ ಎಂಬೆರಡು ಗುಣವಿಶೇಷಗಳು ಅಥವಾ ಗುಣ ಸಮುಚ್ಚಯಗಳು ಓರ್ವವ್ಯಕ್ತಿಯಲ್ಲಿ ಸಮ್ಮಿಳಿತಗೊಳ್ಳತಕ್ಕದ್ದು. ಸಂಕ್ಷಿಪ್ತವಾಗಿ ಹೇಳುವುದಾದರೆದೊರೆಗಳ ರಾಜಕೀಯ ಪಟುತ್ವ ಮತ್ತು ಋಷಿಗಳ ದಾರ್ಶನಿಕ ಮಹತ್ವ – ಇವೆರಡೂ ಓರ್ವವ್ಯಕ್ತಿಯಲ್ಲಿ ಏಕೀಭವಿಸತಕ್ಕದ್ದು. ಆಗ ಮಾತ್ರ ಆಡಳಿತ ಸೂತ್ರಹಿಡಿದವರು ಪ್ರಾಜ್ಞರೂ ವಿದ್ಯಾವಿನಯ ಸಂಪನ್ನರೂ, ಧೈರ್ಯ, ಸ್ಥೈರ್ಯದ ಕಟ್ಟಾಳುಗಳೂ ಆಗಿ ಮಾರ್ಪಡುತ್ತಾ

ರೆಂಬುದು ಪ್ಲೇಟೋನ ನಿರೀಕ್ಷೆ.

ಸಾಮಾನ್ಯವಾಗಿ ಇಂಥಹ ವ್ಯಕ್ತಿಗಳು ಲಭಿಸುವುದು ಬಹುವಿರಳ. ದೇಶಸೇವೆಗೆ ದೊರೆಯುವುದು ದುರ್ಲಭ. ಆದಾಗ್ಯೂ ಶ್ರಮವಹಿಸಿ ಸೂಕ್ತ ವ್ಯಕ್ತಿಗಳನ್ನು ಹುಡುಕಿ ಅಧಿಕಾರಕ್ಕೆ ಆಯ್ಕೆ ಮಾಡತಕ್ಕದ್ದೆಂದು ಪ್ಲೇಟೋ ಅಭಿಪ್ರಾಯ ಪಡುತ್ತಾನೆ. ಮತ್ತೆ ಅಂತಹ ಆಯ್ಕೆ ಬಹು ಎಚ್ಚರಿಕೆಯಿಂದ ಕೂಡಿರತಕ್ಕದ್ದೆಂದು ಈ ಮೊದಲು ತಿಳಿಸಿದೆಯಲ್ಲವೇ? ಆ ಪ್ರಕಾರ ಕುಲೀನರೂ, ಸ್ಫುರದ್ರೂಪಿ ಮೇಧಾವಿಗಳೂ, ಹಾಗೂ ಸಾಹಸಿಗಳೂ ಆಗಿರುವ ತಂದೆ-ತಾಯಿಗಳ ಮಕ್ಕಳನ್ನು ರಾಜ್ಯಪಾಲಕರ ಹುದ್ದೆಗೆ ಆಯ್ಕೆಮಾಡತಕ್ಕದ್ದೆಂದೂ; ಅಂತಹ ತಂದೆ-ತಾಯಿಗಳ ಉತ್ಕೃಷ್ಟ ಗುಣಗಳು ಅನುವಂಶಿಕವಾಗಿ ಬಳುವಳಿಯ ರೂಪದಲ್ಲಿ ಮಗುವಿನಲ್ಲಿ ಬರುವುದೆಂದೂ ನಿರೀಕ್ಷಿಸಲಾಗುವುದು. ಆದರೂ ಇಂತಹ ನಿರೀಕ್ಷೆ ಹಲವು ಸಂದರ್ಭಗಳಲ್ಲಿ ಹುಸಿಯಾಗುವ ಸಂಭವವುಂಟು. ಏಕೆಂದರೆ ಹುಟ್ಟು ವ್ಯಕ್ತಿಯ ಯೋಗ್ಯತೆಯನ್ನು ಅಳೆಯುವ ಏಕಮಾತ್ರ ಮಾನದಂಡವಲ್ಲ ಒಳ್ಳೆಯ ನಡತೆ ವ್ಯಕ್ತಿಯಲ್ಲಿ ವಂಶಾನುಗತವಾಗಿ ಸದಾಕಾಲವೂ ಹರಿದು ಬರುವುದೆಂದು ಭ್ರಮಿಸುವುದು ಅಪಾಯಕರ. ಕಾರಣ ಕುಲೀನ ಹಾಗೂ ಮೇಧಾವಿ ತಂದೆ-ತಾಯಿಗಳ ಮಕ್ಕಳನ್ನು ಆಯ್ಕೆಮಾಡಿ ಕೈಕಟ್ಟಿ ಕುಳಿತುಕೊಳ್ಳುವಂತಿಲ್ಲ. ರಾಜ್ಯಪಾಲಕರಾಗಬಯಸುವವರಲ್ಲಿ ಘನತೆ, ಗಾಂಭೀರ್ಯ, ಪ್ರಾಮಾಣಿಕತೆ, ಕ್ರಿಯಾಶೀಲತೆ ಇತ್ಯಾದಿ ಉತ್ಕೃಷ್ಟ ಗುಣಗಳು ಆವಿಷ್ಕಾರವಾಗಿರತಕ್ಕದ್ದು. ಅಂತಹ

ಗುಣಗಳು ವ್ಯಕ್ತಿಯಲ್ಲಿ ಸುಮ್ಮನೇ ಬರುವುದೇ? ಸಾಧನೆ, ಸಿದ್ಧಿ ಅಥವಾ ಪರಿಶ್ರಮ ಒಂದೂ ಬೇಡವೇ? ಜನತೆಯ ಭವಿಷ್ಯವನ್ನು ರೂಪಿಸುವ ಚೈತನ್ಯಶಾಲೀ ಮುತ್ಸದ್ದಿಗಳಾಗಿ ಪರಿವರ್ತನೆಗೊಳ್ಳುವುದು ಸಾಮಾನ್ಯವೆ? ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಬೇಕಾಗಿಲ್ಲ. ಪ್ಲೇಟೋ ನೇರವಾಗಿ ಉತ್ತರಿಸುತ್ತಾನೆ. ಈ ದೆಸೆಯಲ್ಲಿ ಆಳುವವರನ್ನು ಸೂಕ್ತವಾದ ಶಿಕ್ಷಣಕ್ಕೆ ಗುರಿಪಡಿಸತಕ್ಕದ್ದು. ಚಾರಿತ್ರ್ಯ ಶುದ್ಧಿಗೊಳ್ಳುವುದೂ, ಸಜ್ಜನಿಕ ಆವಿಷ್ಕಾರವಾಗುವುದೂ ಶಿಕ್ಷಣದಿಂದ. ಅಂತಹ ಶಿಕ್ಷಣ ಪ್ಲೇಟೋನ ದೃಷ್ಟಿಯಲ್ಲಿ ಸರಳವಾದುದಲ್ಲಿ ಕ್ಲಿಷ್ಟವಾದುದು. ದೈಹಿಕ, ಬೌದ್ಧಿಕ ಮತ್ತು ನೈತಿಕ ವಿಕಾಸಕ್ಕೆ ಪೂರಕವಾದ ಶಿಕ್ಷಣವೆನ್ನಿಸಿರಬೇಕು. ಅವನ ಅಭಿಪ್ರಾಯದಲ್ಲಿ ಶಿಕ್ಷಣವೆಂಬುದು ಸಮಗ್ರ ಜೀವನದ ಸಮಗ್ರ ಸಮಸ್ಯೆಗಳನ್ನೂ ವಿಶ್ಲೇಷಿಸುವ ಮತ್ತು ಸೃಷ್ಟಿಯ ಸರ್ವ ರಹಸ್ಯವನ್ನು ಬೇಧಿಸುವ ಚೈತನ್ಯವನ್ನು ವ್ಯಕ್ತಿಗೆ ತಂದುಕೊಡುವಂತಹದ್ದಾಗಿರಬೇಕು.

## ರಾಜ್ಯಪಾಲಕರ ಶಿಕ್ಷಣ

ಹಾಗಾದರೆ ಅಂತಹ ಶಿಕ್ಷಣದ ಸ್ವರೂಪವೇನು? ಈ ಪ್ರಶ್ನೆಗೆ ಪ್ಲೇಟೋನ ಉತ್ತರ ಬಹು ಸರಳ. ಪ್ರಾಥಮಿಕ ಮಟ್ಟದಿಂದ ಆರಂಭಿಸಿ ಐವತ್ತು ವರ್ಷಗಳ ವರೆಗೆ ಹಂತ ಹಂತವಾಗಿ ಮುಂದುವರಿಯುವ ದೀರ್ಘ ಶಿಕ್ಷಣ. ಬಾಲ್ಯದ ಮಟ್ಟದಲ್ಲಿ ಅಂಗಸಾಧನೆ, ಓದು, ಬರಹ, ಕಾವ್ಯ, ಗಣಿತ, ನೀತಿಶಾಸ್ತ್ರ, ಸಂಗೀತ ಅಭ್ಯಾಸ ಇತ್ಯಾದಿ ವಿಷಯಗಳನ್ನು ನಿಗದಿಪಡಿಸಲಾ

ಗುವುದು. ಇಪ್ಪತ್ತರಿಂದ ಮೂವತ್ತರ ವರೆಗೆ ಮತ್ತೊಂದು ಹಂತ. ಇಲ್ಲಿಂದ ಪ್ರೌಢವ್ಯಾಸಂಗ ಪ್ರಾರಂಭ. ಗಣಿತ ಹಾಗೂ ಅದರ ವಿಭಿನ್ನ ಪ್ರಕಾರಗಳು, ಖಗೋಳ ಶಾಸ್ತ್ರ ಮತ್ತು ತರ್ಕಶಾಸ್ತ್ರಗಳಿಗೆ ಪ್ರಾಶಸ್ತ್ಯ. ಮೂವತ್ತೈದು ವರ್ಷ ವಯಸ್ಸಿನ ಆಚೆಗೆ ಪರಿಸ್ಕೃತ ಶಿಕ್ಷಣ ಪ್ರಾರಂಭ. ಈ ಅವಧಿಯಲ್ಲಿ ಯೋಗ ವಿದ್ಯೆ, ಸಾಮಾನ್ಯ ಹಾಗೂ ಸೈನಿಕ ಆಡಳಿತದಲ್ಲಿ ತರಬೇತಿ ಜೊತೆಗೆ ನ್ಯಾಯಶಾಸ್ತ್ರದಲ್ಲಿ ವ್ಯಾಸಂಗ. ಇದರಲ್ಲಿ ತೇರ್ಗಡೆಯಾದವರು ಐವತ್ತನೇ ವಯಸ್ಸಿಗೆ ಸಮಾಜದ ಒಳಿತನ್ನು ಕುರಿತು ಚಿಂತನೆಯಲ್ಲಿ ಮಗ್ನರಾಗತಕ್ಕದ್ದು. ಈ ಹಂತದಲ್ಲಿ ತತ್ವಶಾಸ್ತ್ರದಲ್ಲಿ ವಿಶೇಷ ವ್ಯಾಸಂಗ ವ್ಯವಸ್ಥೆ. ಅಂದರೆ ಜೀವ, ಜಗತ್ತು, ಆತ್ಮ, ಪರಮಾತ್ಮ ಇತ್ಯಾದಿ ವಿಷಯಗಳನ್ನು ಕುರಿತು ಆಳವಾದ ಅಧ್ಯಯನದಲ್ಲಿ ತೊಡಗುವುದು. ಒಟ್ಟಾರೆ ಇಂತಹ ಶಿಕ್ಷಣದ ಮೂಲ ಉದ್ದೇಶ ವ್ಯಕ್ತಿಯಲ್ಲಿ ಸತ್ಯದ ಸಾಕ್ಷಾತ್ಕಾರ ಅಥವಾ ಸತ್ಯದ ದರ್ಶನ ಮಾಡಿಕೊಳ್ಳಲು ಅವಕಾಶ ಕಲ್ಪಿಸುವುದು ಈ ಎಲ್ಲ ಹಂತದ ಪರೀಕ್ಷೆಗಳಲ್ಲಿ ಎಲ್ಲರೂ ತೇರ್ಗಡೆಯಾಗುವುದು ಅಸಂಭವ. ತೇರ್ಗಡೆಯಾದ ಕೇವಲ ಕೆಲವೇ ಅಭ್ಯರ್ಥಿಗಳನ್ನು ಮಾತ್ರ ಆಳುವ ವರ್ಗಕ್ಕೆ ಅರ್ಹರೆಂದು ಪರಿಗಣಿಸಿ, ಮತ್ತೆ ಅವರಲ್ಲಿಯೇ ಉತ್ಕೃಷ್ಟರೆನಿಸಿದವರನ್ನು ರಾಜ್ಯಪಾಲಕರ ಹುದ್ದೆಗೆ ಆಯ್ಕೆ ಮಾಡತಕ್ಕದೆಂದೂ, ಮತ್ತೆ ಅವರೇ ರಾಜರ್ಷಿಗಳೆಂದೂ ಪ್ಲೇಟೋ ತೀರ್ಮಾನಿಸುತ್ತಾನೆ.

ಈ ಪರಿಯ ಶಿಕ್ಷಣವನ್ನು ಕೊಡಿಸುವ ಉದ್ದೇಶ ಸುಸ್ಪಷ್ಟ. ರಾಜ್ಯದ ಕಲ್ಯಾಣ ಸಾಧನೆಯೇ ಹೊರತು ಬೇರೆಯಲ್ಲ. ಹೀಗೆ ಪರಿಣತ ವಯಸ್ಸು, ಪಕ್ವ ಮನಸ್ಸು, ವಿಶಾಲ ಹೃದಯ, ಅಪಾರ ಪಾಂಡಿತ್ಯ ಮತ್ತು ಉಚ್ಚ ಶಿಕ್ಷಣ ಇವುಗಳು ಓರ್ವನಲ್ಲಿ ಸಂಮಿಲನಗೊಂಡಾಗ ಸಹಜವಾಗಿ "ವ್ಯಕ್ತಿ-ಶಕ್ತಿ"ಗಳ ಆವಿರ್ಭಾವವಾಗುತ್ತದೆ. ಆಗ ಆಳುವವರು ಅಸಾಮಾನ್ಯರಾಗುವರು. ಮತ್ತೆ ಅವರ ವಿಷಯದಲ್ಲಿ ಯಾವುದೇ ಶಂಕೆಗೆ ಎಡೆ ಇಲ್ಲ. ಇಂಥವರು ಅಧಿಕಾರ ಚಲಾಯಿಸಲು ಅಯೋಗ್ಯರಾಗುವ ಸಂಭವ ಕಡಿಮೆ. ಇವರನ್ನು ಕಾಯಿದೆಗಳಿಂದ ನಿರ್ಬಂಧಿಸುವುದಾಗಲೀ ಅಥವಾ ಅಧಿಕಾರದಿಂದ ಉಚ್ಚಾಟಿಸುವುದಾಗಲೀ ಅಸಾಧ್ಯ. ಏಕೆಂದರೆ, ಐವತ್ತು ವರ್ಷದ ದೀರ್ಘ ಹಾಗೂ ಕಠಿಣ ಶಿಕ್ಷಣವನ್ನು ಪೂರೈಸಿ, ರಾಜ್ಯಪಾಲಕರ ಹುದ್ದೆಗೆ ಉಮೇದುವಾರಿಕೆಯನ್ನು ಸಲ್ಲಿಸಿದ ಮೇಲೆ, ಕಾನೂನಿನ ನಿಯಂತ್ರಣಕ್ಕೆ ಬದ್ಧರಾಗಿಸುವಂತಿಲ್ಲ. ಅವರು ನಿಯಂತ್ರಣಾತೀತರು (Philopsopher-Kings are above laws) ಎಂಬುದು ಪ್ಲೇಟೋನ ವಾದ. ಇಂಥವರಿಂದಲೇ ಧರ್ಮ ರಕ್ಷಣೆ ಮತ್ತು ನ್ಯಾಯ ಪರಿಪಾಲನೆಯಾಗಿ ರಾಜ್ಯದ ಸಮಗ್ರ ಕಲ್ಯಾಣ ಸಾಧ್ಯವಾಗುವುದರಲ್ಲಿ ಸಂದೇಹ ವಿಲ್ಲವೆಂದು ಪ್ಲೇಟೋ ಸಾರುತ್ತಾನೆ.

# ೧೯. ವರ್ಗ ಶುದ್ಧತೆ

ಪ್ಲೇಟೋ ಪ್ರತಿಪಾದಿತ ಆದರ್ಶ ರಾಜ್ಯದಲ್ಲಿ ಸರಕಾರದ ಪಾತ್ರ ಹಿರಿದು. ಸಮಗ್ರ ಪ್ರಜೆಗಳು ಅದರ ಅಧಿಕಾರ ಕಕ್ಷೆಯಲ್ಲಿ ಬರುತ್ತಾರೆ. ಪ್ರಭುತ್ವವೇ ಸರ್ವಸ್ವ. ಅದಕ್ಕೆ ಹೊರತಾಗಿ ಯಾರೂ ಉಳಿಯುವಂತಿಲ್ಲ. ಸಾಮೂಹಿಕವಾಗಿ ಪ್ರಜೆಗಳ ಎಲ್ಲ ಚಟುವಟಿಕೆಗಳೂ ಅದರ ನಿಯಂತ್ರಣಾಧೀನ. ಖಾಸಗೀ ಜೀವನ ನಿಷಿದ್ಧ. ಹೆಚ್ಚು ಕಡಿಮೆ ಸಮತಾವಾದೀ ವ್ಯವಸ್ಥೆ. ಇಂತಹ ಒಂದು ವ್ಯವಸ್ಥೆಯ ಮೂಲಧ್ಯೇಯ ಉತ್ತಮ ಪ್ರಜೆಗಳನ್ನು ಪಡೆಯುವುದು. ಪ್ರಜೆಗಳು ಉತ್ತಮ ನಾಗರೀಕರಾಗದೆ, ಪ್ರತಿಭಾಸಂಪನ್ನರಾಗದೆ ಆದರ್ಶ ರಾಜ್ಯವೆನಿಸದು. ಹಾಗಾದರೆ ಸತ್ವಶಾಲೀ ಹಾಗೂ ಪ್ರತಿಭಾಸಂಪನ್ನ ಪ್ರಜೆಗಳು ಲಭಿಸುವುದು ಹೇಗೆ ? ಈ ವಿಷಯದಲ್ಲಿ ಪ್ಲೇಟೋ "ವರ್ಗ ಶುದ್ಧತೆ"ಗೆ ಪ್ರಾಧಾನ್ಯ ಕೊಡಬೇಕೆಂದು ಹೇಳುತ್ತಾನೆ. ಅವನ ಅಭಿಪ್ರಾಯದಲ್ಲಿ ಸಮಾಜದ ಭಿನ್ನ ಭಿನ್ನ ವರ್ಗಗಳಲ್ಲಿ ದೈಹಿಕ ಸಂಬಂಧ ವರ್ಜ್ಯ. ವರ್ಗ ಸಂಕರವಾದರೆ ದುರ್ಬಲ ಸಂತತಿ ಅನಿವಾರ್ಯ ಇದೊಂದು ಅನಿಷ್ಟ. ಕಾರಣ, ಸರಕಾರ ಜನತೆಯ ಲೈಂಗಿಕ ವಿಷಯದಲ್ಲಿ ಕಟ್ಟುನಿಟ್ಟಿನ ನಿಯಂತ್ರಣ ಹೇರತಕ್ಕದ್ದು. ಇಲ್ಲದೆ ಪಕ್ಷದಲ್ಲಿ ಉತ್ತಮ ಸಂತತಿ ದೊರೆಯದು. ಅಂದರೆ ಸ್ಫುರದ್ರೂಪಿಗಳಾದ ಸದೃಢ ಕಾಯದ ಧೀಮಂತ ಶಿಶುಗಳೇ ಜನಿಸಬೇ

ಕೆಂದರೆ, ಉತ್ತಮ ಪುರುಷರು ಉತ್ತಮ ಸ್ತ್ರೀಯರೊಂದಿಗೂ; ಮಧ್ಯಮರು ಮಧ್ಯಮರೊಂದಿಗೂ, ಅಧಮರು ಅಧಮರೊಂದಿಗೂ ಸೂಕ್ತ ಕಾಲದಲ್ಲಿ ಕೂಡುವಂತೆ ಸರಕಾರ ಏರ್ಪಾಡು ಮಾಡತಕ್ಕದ್ದು. ಇದಕ್ಕೆ ವ್ಯತಿರಿಕ್ತವಾಗಿ ಯಾರೂ ವರ್ತಿಸುವಂತಿಲ್ಲ. ವರ್ಗಸಂಕರವಾದರೆ ದುರ್ಬಲ ಹಾಗೂ ಮಿಶ್ರ ಸಂತತಿ ಲಭ್ಯ. ಸಹಜವಾಗಿ ಕುರೂಪಿ ಹಾಗೂ ಬಲಹೀನ ಶಿಶುಗಳು ಜನಿಸುವುವೆಂಬ ಶಂಕೆ. ದುರ್ಬಲ ಸಮಾಜ ಎಂದಾದರೂ ಆದರ್ಶ ಸಮಾಜವಾದೀತೇ? ಎಂದ ಮೇಲೆ ಅಂತಹ ದುರ್ಬಲ ಶಿಶುಗಳನ್ನು ಗಂಡಾಂತರಕ್ಕೆ ಗುರಿಮಾಡತಕ್ಕದ್ದೆಂದು ಪ್ಲೇಟೋನ ಅಭಿಪ್ರಾಯ. ಸಮಕಾಲೀನ ಸ್ಪಾರ್ಟಾ ದೇಶ ಈ ಪದ್ಧತಿಯನ್ನು ಅನುಸರಿಸುತಿತ್ತು. ಪ್ರಜೆಗಳಲ್ಲಿ ಸಿಸ್ತು ಮತ್ತು ಶೌರ್ಯ ಮೂಡಿಸಲು ಅಲ್ಲಿ ಕಡ್ಡಾಯ ಸೈನಿಕ ಶಿಕ್ಷಣ ಆಚರಣೆ ತರಲಾಗಿತ್ತು. ದುರ್ಬಲ ಶಿಶುಗಳು ಜನಿಸಿದರೆ ಅವು ಗಂಡಾಂತರಕ್ಕೆ ಗುರಿಪಡಿಸುವ ಸಂಪ್ರದಾಯವಿತ್ತು. ಪ್ಲೇಟೋ ಇದರಿಂದ ಪ್ರಭಾವಿತನಾಗಿರಬಹುದೆಂದು ನಾವು ಇಲ್ಲಿ ಸ್ಮರಿಸಬಹುದು. ಅದು ಹೇಗೋ ಇರಲಿ, ವರ್ಗ ಶುದ್ಧತೆಯನ್ನು ಕಾಪಾಡುವುದರ ಮೂಲಕ ಬಲಿಷ್ಟ ಜನಾಂಗವನ್ನು ಪಡೆಯುವ ಆದರ್ಶ ವೈಜ್ಞಾನಿಕವಾಗಿ ಮತ್ತು ವ್ಯವಹಾರಿಕವಾಗಿ ಎಷ್ಟರಮಟ್ಟಿಗೆ ಕಾರ್ಯಸಾಧುವೆಂಬುದು ಬೇರೇ ಪ್ರಶ್ನೆ.

# ೨೦. ರಾಜ್ಯ ಪಾಲಕರು ಮತ್ತು ಅವರ ಜೀವನ ಸೌಕರ್ಯ

ಆದರ್ಶ ರಾಜ್ಯದಲ್ಲಿ ರಾಜ್ಯಪಾಲಕರ ಸ್ಥಾನ ವಿಶಿಷ್ಟ ವಾದುದು. ಅವರದು ಪ್ರಜೆಗಳಲ್ಲಿಯೇ ಮೇಲ್ಪಂಕ್ತಿ. ರಾಜ್ಯದ ಆಡಳಿತಾಧಿಕಾರ ತಮ್ಮಲ್ಲಿಯೇ ಕೇಂದ್ರೀಕೃತವಾಗಿದ್ದರೂ ಅವರ ನಿರ್ವಹಣೆ ನಿರ್ಬಂಧರಹಿತವೆಲ್ಲ! ಸರ್ಕಾರದ ಉಸ್ತುವಾರಿಯಲ್ಲಿಯೇ ಅವರ ಸಮಸ್ತ ಚಟುವಟಿಕೆಗಳು ನಡೆಯುತ್ತಿದ್ದುವು. ಯಾವ ಸಂಧರ್ಭದಲ್ಲೂ ಅಧಿಕಾರ ದುರುಪಯೋಗವಾಗುವಂತಿಲ್ಲ. ಅಷ್ಟೊಂದು ಬಿಗು ನಿಯಂತ್ರಣ. ಎಲ್ಲದೂ ನಿಯಮ ಬದ್ಧ. ಎಲ್ಲೂ ನಿಯಮ ಮೀರಿ ನಡೆಯುವಂತಿಲ್ಲ. ರಾಜ್ಯಪಾಲಕರ ದೈನಂದಿನ ನಡತೆ ಸಮರ್ಪಕರಾಗಿವೆಯೋ ಇಲ್ಲವೋ ಎಂಬುದನ್ನು ಪರಿಕ್ಷಿಸಲು "ದೋಷ ವಿಮರ್ಶನಾಧಿಕಾರಿ'' (Censors)ಗಳನ್ನು ಸರಕಾರ ನೇಮಿಸುವುದು. ಅವರ ಜೀವನಕ್ಕೆ ಅವಶ್ಯವಾದ ಎಲ್ಲ ಸೌಲಭ್ಯ ಸೌಕರ್ಯಗಳನ್ನು ಒದಗಿಸುವುದು ಸರಕಾರದ ಹೊಣೆಗಾರಿಕೆ. ಸಂತೋಷ ಕೂಟಗಳಲ್ಲಿ ಸ್ವೇಚ್ಛೆಯಾಗಿ ಭಾಗವಹಿಸುವುದಾಗಲೀ, ಸಾಮಾನ್ಯ ಜನರೊಂದಿಗೆ ಬೆರೆಯುವುದಾಗಲೀ ಮತ್ತೆ ರಾಜ್ಯದ ಹೊರಗಡೆ ಪ್ರವಾಸ ಮಾಡುವುದಾಗಲೀ ನಿಷಿದ್ಧ. ಜನರೊಡನೆ ಬೆರೆತರೆ ಕಾಮುಪ್ರಚೋದನೆಯಾಗುತ್ತದೆ. ಸಂಕುಚಿತ ಬುದ್ಧಿ ಬೆಳೆಯುತ್ತದೆ ಎಂಬ ಶಂಕೆ. ಅಲ್ಲದೆ, ಅಧಿಕಾರ

ದುರುಪಯೋಗವಾಗುವ ಸಂಭವವೂ ಉಂಟು. ಖಾಸಗೀ ಆಸ್ತಿ, ಸಂಸಾರ ಇತ್ಯಾದಿಗಳ ಹಂಬಲವಿಲ್ಲ. ರಾಜ್ಯಪಾಲಕರಿಗಾಗಿಯೇ ನಿರ್ಮಿತವಾದ ಸಾರ್ವಜನಿಕ ಶಿಬಿರಗಳಲ್ಲಿಯೇ ಜೀವಿಸತಕ್ಕದ್ದು. ಅವರ ಸಮಸ್ತ ಚಲನವಲನಗಳು ಸರಕಾರದ ನಿಯಂತ್ರಣಕ್ಕೆ ಬರುತ್ತದೆ ಎಂದು ಮೇಲೆ ರಾಜ್ಯಪಾಲಕರ ಜೀವನ ಕಠಿಣ ಮತ್ತು ನಿಯಮಬದ್ಧ. ಒಂದು ರೀತಿಯಲ್ಲಿ ದಂಡಿನಲ್ಲಿರುವ ಯೋಧರ ಜೀವನಕ್ಕಿಂತಲೂ ನಿಕೃಷ್ಟ. ಅವರಿಗೆ ಸ್ವಂತದ್ದು ಎಂಬುದು ಯಾವುದೂ ಇಲ್ಲ. ಸಮಾಜ ಸೇವೆಗಾಗಿಯೇ ಇಡೀ ಜೀವನ ಮೀಸಲು. ಸಮಾಜೋನ್ನತಿಯ ನಿರಂತರ ಚಿಂತನೆಯಲ್ಲಿಯೇ ಅವರು ಮಗ್ನರಾಗಿರಬೇಕಿತ್ತು.

## ರಾಜ್ಯಪಾಲಕರು ಮತ್ತು ಅವರ ಸುಖದ ವಿಚಾರ

ರಾಜ್ಯಪಾಲಕರ ಸುಖದ ವಿಚಾರವಾಗಿ ಪ್ಲೇಟೋ ಮಂಡಿಸಿದ ವಿಚಾರಗಳು ಬಹು ಮನನೀಯವಾಗಿವೆ. ಯಾವುದೇ ದೇಶದ ಆಗು-ಹೋಗುಗಳು ಆ ದೇಶದ ಮುಖಂಡರು ಮತ್ತು ಅವರು ಅಧಿಕಾರ ಚಲಾಯಿಸುವ ರೀತಿ-ನೀತಿಯನ್ನವಲಂಬಿಸಿದೆ ಎಂಬುದು ಸುಸ್ಪಷ್ಟ. ಎಂಥದೇ ಸಂದರ್ಭದಲ್ಲಿ ಅಧಿಕಾರ ದುರುಪಯೋಗವಾಗಕೂಡದು. ರಾಜ್ಯಭಾರ ಮಾಡುವವರು ಸದಾ ನಿಸ್ಪೃಹ ಹಾಗೂ ಪ್ರಾಮಾ

ಣಿಕ ವ್ಯಕ್ತಿಗಳಾಗಿ ಉಳಿಯತಕ್ಕದ್ದು. ಆಗ ಮಾತ್ರ ದಕ್ಷ ಆಡಳಿತ ಸಾಧ್ಯವಾಗಿ ಸುಖ ಸಮೃದ್ಧಿ ನೆಲೆಗೊಳ್ಳುವುವು. ಅಂತಹ ರಾಜ್ಯ ಆದರ್ಶವೆನಿಸುವುದು.

ಇದು ಹೇಗಾದರೆ ಸಾಧ್ಯ ? ಹೇಗಾದರೆ ಆಳುವವರು ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಗಳಾಗಿ ಉಳಿಯುವರು? ಈ ಪ್ರಶ್ನೆಗಳಿಗೆ ಪ್ಲೇಟೋನ ನೇರ ಉತ್ತರ ಸಿದ್ಧ. ಆಳುವ ವರನ್ನು ಒಂದು "ಸನ್ನಿವೇಶ"ಕ್ಕೆ ಗುರಿಪಡಿಸತಕ್ಕದ್ದು ಎಂದು ಅಭಿಪ್ರಾಯಪಡುತ್ತಾನೆ. ಸನ್ನಿವೇಶದ ಬಗ್ಗೆ ಪ್ಲೇಟೋ ಒಂದು ವಾದವನ್ನು ಮಂಡಿಸುತ್ತಾನೆ. ಅದು ಬೇರಾವುದೂ ಅಲ್ಲ. "ಒಂದು ರೀತಿಯ ಕಮ್ಯುನಿಸಂ" ಇಲ್ಲಿ ಪ್ರಜೆಗಳೆಲ್ಲರೂ ಸಮಾನರು. ಅದರಲ್ಲಿ ರಾಜ್ಯಪಾಲಕರ ಜೀವನ ಕೊಂಚ ಕಠಿಣ ಹಾಗೂ ನಿಯಮ ಬದ್ಧ. ಅಂದರೆ ಅವರಿಗೆ ಮನೆ, ಮಠ, ಮಡದಿ,ಮಕ್ಕಳು ಎಂಬ ವ್ಯಾಮೋಹವಿರಕೂಡದು. ಮಮತೆ ಮಮಕಾರಗಳಿಗೆ ಉಗಮಸ್ಥಾನ ಕುಟುಂಬ ವ್ಯವಸ್ಥೆ ತಾನೆ ? ಅಂತಹ ವ್ಯವಸ್ಥೆ ಇರಕೂಡದು. ಸಮಾಜದ ಹಿತದಲ್ಲಿ ವ್ಯಕ್ತಿಯ ಕುಟುಂಬ ಜೀವನ ಗೌಣ. ಕುಟುಂಬ ಹಿತ ಗಣನೆಗೆ ಬಾರದು. ಇಲ್ಲಿ ಒಂದು ವಿಷಯ ಗಮನಾರ್ಹ. ಅದೇನೆಂದರೆ ಪ್ಲೇಟೋ ಪ್ರತಿಪಾದಿತ "ಕಮ್ಯುನಿಸಂ" "ಇಬ್ಬಾಯ ಖಡ್ಗ"ವಿದ್ದ ಹಾಗೆ. ಜಳಪಿಸಿದಾಗ ಒಂದು ಅಲಗಿನಿಂದ "ಕುಟುಂಬ" (family) ನಾಶವಾಗುತ್ತದೆ. ಇನ್ನೊಂದರಿಂದ "ಖಾಸಗಿ ಆಸ್ತಿ" (private property)

ಸಂಹರಿಸಲ್ಪಡುತ್ತದೆ. ಇವೆರಡು ಸಂಸ್ಥೆಗಳ ಅಳಿವು ಸಮಾಜದ ಸ್ವಾಸ್ಥ್ಯಕ್ಕೆ ಸಹಕಾರಿ ಎಂದು ಪ್ಲೇಟೋನ ಅಭಿಪ್ರಾಯ.

## ೨೧. ಆಳುವವರು—ಭೋಗ ಜೀವನ

ಆಳುವವರು ಏಕಾಗ್ರ ಚಿತ್ತರಾಗಿ, ಯಾವ ಮನಕ್ಲೇಶಗಳಿಗೂ ಎಡೆಕೊಡದಂತೆ, ಸದಾ ಆಡಳಿತ ಕಾರ್ಯದಲ್ಲಿಯೇ ಮಗ್ನರಾಗಿರಬೇಕೆಂದು ಪ್ಲೇಟೋ ಅಪೇಕ್ಷಿಸುತ್ತಾನೆ. ದಕ್ಷ ಆಡಳಿತಕ್ಕೆ ಏಕಾಗ್ರತೆ ಬೇಕು. ದೇವರ ಧ್ಯಾನದಲ್ಲಿ ಮಗ್ನನಾದವನಿಗೆ ಚಿತ್ತ ಚಾಪಲ್ಯ ಹೇಗೆ ಇರುವುದಿಲ್ಲವೋ, ಹಾಗೆ ರಾಜಕಾರ್ಯದಲ್ಲಿ ಮಗ್ನನಾದವನಿಗೆ ಸುಖಲೋಲುಪ್ತಿ ಇರಕೂಡದು. ಇವರ ಗಮನವೆಲ್ಲಾ ಪ್ರಜೆಗಳ ಸುಖದ ಕಡೆಗೇ ಕೇಂದ್ರೀಕೃತವಾಗಿರತಕ್ಕದ್ದು. ಕಾರಣ ರಾಜ್ಯಪಾಲಕರು ಅವಿವಾಹಿತರಾಗಿಯೇ ಇರತಕ್ಕದ್ದು. ಸಂಸಾರದ ಹಂಬಲ, ಅಧಿಕಾರದ ಮೋಹ, ದ್ರಾವ್ಯದ ಮೇಲಿನ ಆಕಾಂಕ್ಷೆ, ಸುಖದ ಆಸೆ ಇತ್ಯಾದಿ ಯಾವೊಂದೂ ಆಮಿಷ ಇರಕೂಡದು. ದೇಹ, ಮನಸ್ಸು, ಬುದ್ಧಿ ರಾಜ್ಯದ ಸೇವೆಗಾಗಿಯೇ ಅರ್ಪಿತ. ಖಾಸಗೀ ಜೀವನ ನಿಷಿದ್ಧ. ಹೆಂಡರು-ಮಕ್ಕಳು, ಬಂಧು-ಬಳಗದವರ ಬಗ್ಗೆ ಮಮತೆ ಮಮಕಾರಗಳು ಸುಳಿಯಬಾರದು.

ರಾಜ್ಯಪಾಲಕರು ಸಮಾಜದಲ್ಲಿ ಉನ್ನತಾಧಿಕಾರದ ಗಣ್ಯ ವ್ಯಕ್ತಿಗಳಲ್ಲವೇ ? ಅಂದ ಮೇಲೆ ಅವರ ಉನ್ನತ ಸ್ಥಾನಕ್ಕನುಗುಣವಾಗಿ ಪ್ರಭುತ್ವ ಸೂಕ್ತವಾದ ಸೌಕರ್ಯಗಳನ್ನು ಒದಗಿಸಿ-

ಅವರು ಸದಾಸುಖಿಗಳಾಗಿರಿಸಬೇಕೆಂದು ಕೆಲವರು ವಾದಿಸಬಹುದು. ಆದರೆ ಈ ಬಗೆಯ ಸುಖ ಜೀವನ ಅವರಿಗೆ ತಕ್ಕುದಲ್ಲ. ಯಾವುದೇ ತೆರನ ಇಂದ್ರಿಯ ಚಾಪಲ್ಯ ಕೂಡದು. ಹೆಚ್ಚು ಹೆಚ್ಚು ಹಣ ಅವರಲ್ಲಿ ಸಂಗ್ರಹವಾದಂತೆಲ್ಲ ಸೋಮಾರಿತನ ಬೆಳೆಯುತ್ತದೆ. ಇನ್ನೊಂದೆಡೆ; ಮತ್ತೆ ಅತಿಯಾದ ಕಾರ್ಪಣ್ಯ ಜೀವನವೂ ನಿಷಿದ್ಧ. ಅತಿ ಕಾರ್ಪಣ್ಯ ದಕ್ಷತೆಗೆ ಮಾರಕ. ಇವೆರಡರ ಸಮತೋಲನ ತಾರಕ. ಒಟ್ಟಾರೆ ಉನ್ನತಾಧಿಕಾರಿಗಳು ಸತ್ವಶಾಲಿಗಳಾಗಿದ್ದರೆ ರಾಜ್ಯ ಪ್ರಗತಿ ಪಥದಲ್ಲಿ ಸಾಗುವುದಿಲ್ಲ. ಆಳುವವರು ಇಂದ್ರಿಯ ಚಾಪಲ್ಯಕ್ಕೆ ಒಳಗಾಗದೆ, ಸ್ವಾರ್ಥವನ್ನೂ ಮರೆತು, ದೇಶ ಸೇವೆಗೆ ತಮ್ಮನ್ನು ತಾವು ಅರ್ಪಿಸಿಕೊಳ್ಳಬೇಕು. ಅಂಥವರು ಮಾತ್ರ ಅಧಿಕಾರ ಸೂತ್ರ ಹಿಡಿಯಲು ಸಮರ್ಥರು ಎಂದು ಪ್ಲೇಟೋ ವಾದಿಸುತ್ತಾನೆ.

ರಾಜ್ಯಪಾಲಕರಿಗೆ ಹೆಂಡರು-ಮಕ್ಕಳ ಸಂಪರ್ಕವಿರಕೂಡದೆಂದು ಈ ಮೊದಲು ಹೇಳಿದೆ. ಆಂದರೆ ರಾಜರ್ಷಿಗಳು ಆಜನ್ಮಪರ್ಯಂತ ಬ್ರಹ್ಮಚಾರಿಗಳಾಗಿಯೇ ಉಳಿಯಬೇಕಿಲ್ಲ. ತಮ್ಮ ಸಮಾನ ಸ್ಥಾನದಲ್ಲಿರುವ ಸ್ತ್ರೀಯರೊಂದಿಗೆ ಕೂಡಿಕೊಳ್ಳಬಹುದು. ಈ ಪ್ರೇಯಸೀಯರು ಅವರಷ್ಟೇ ದೃಢಕಾಯರೂ, ಸುರೂಪಿಗಳೂ ಹಾಗೂ ಸಜ್ಞಾನಿಗಳೂ ಆಗಿರತಕ್ಕದ್ದು. ಕಂಡವರೊಡನೆ ಲೈಂಗಿಕ ಸಂಪರ್ಕವಿರಕೂಡದು. ಈ ಅಧಿಕಾರಿಗಳಿಗೆಂದೇ ನಿರ್ಮಿತವಾದ ಪ್ರತ್ಯೇಕ ಶಿಬಿರಗಳಲ್ಲಿ ಅಂತಹ ಉಚ್ಚ ಸ್ತ್ರೀಯರೊಂದಿಗೆ ಕೂಡಬಹುದು. ಆದರೆ

ರಾಜ್ಯಪಾಲಕರು ಈ ಸಂಗಾತಿಗಳನ್ನು ನಿರಂತರ ತಮ್ಮೊಡನೆ ಇಟ್ಟುಕೊಳ್ಳುವಂತಿಲ್ಲ. ಇವರಿಂದ ಹುಟ್ಟಿದ ಶಿಶುಗಳನ್ನೂ ಸಹ ತಮ್ಮ ಸಂಪರ್ಕದಲ್ಲಿ ಇಟ್ಟುಕೊಂಡು ಸಾಕುವಂತಿಲ್ಲ. ಹುಟ್ಟಿದ ಮಕ್ಕಳನ್ನು ಪ್ರತ್ಯೇಕ ಶಿಶು ಸಂರಕ್ಷಣಾ ಶಾಲೆಗೆ ಒಪ್ಪಿಸತಕ್ಕದ್ದು. ಸರ್ಕಾರದ ಉಸ್ತುವಾರಿಯಲ್ಲಿ ಆ ಮಕ್ಕಳ ಪೋಷಣೆ ನಿರ್ವಹಣೆ ವ್ಯವಸ್ಥೆ. "ಇವಳು ನನ್ನ ಹೆಂಡತಿ", "ಇದು ನನ್ನ ಮಗು" ಎಂದು ಯಾರೊಬ್ಬರೂ ನೇರವಾಗಿ ಗುರುತಿಸುವಂತಿಲ್ಲ ಎಲ್ಲ ರಹಸ್ಯವಾಗಿಡಲಾಗುವುದು. ಮಡದಿ ಮಕ್ಕಳ ವ್ಯಾಮೋಹ ಸುಳಿಯುವಂತಿಲ್ಲ. ಆಳುವವರ ಲಕ್ಷ ಪ್ರಜೆಗಳ ಯೋಗ ಕ್ಷೇಮದ ಕಡೆಗೇ ಹೊರತು, ಮಡದಿ-ಮಕ್ಕಳ ಕಡೆಗಲ್ಲ. ಹಾಗೆಂದರೆ ಕಾಮೋಪಭೋಗವು ಇಲ್ಲವೆಂದಲ್ಲ. ಲೈಂಗಿಕ ಕ್ರಿಯೆ ಒಂದು ವ್ಯವಸ್ಥಿತ ಕ್ರಮಕ್ಕೆ ಒಳಗಾಗಿರತಕ್ಕದ್ದು. (ಪ್ರಾಣಿಗಳು ಋತುಮಾನಕ್ಕೆ ಒಳಗಾಗಿ ರತಿಕ್ರೀಡೆ ಮಾಡುವಂತೆ, ಇವರು ಕಾನೂನಿನ ನಿಯಂತ್ರಣಕ್ಕೊಳಗಾಗಿ ರತಿ ಕ್ರೀಡೆಗೆ ತೊಡಗುತ್ತಾರೆ) ರತಿ ಕ್ರೀಡೆ ಜನಾಂಗದ ಅಭಿವೃದ್ಧಿಗೇ ಹೊರತು ಕ್ಷಣಿಕ ಕಾಮ ತೃಪ್ತಿಗಲ್ಲ. ವರ್ಗ ಸಂಕರಕ್ಕೆ ಅವಕಾಶವಿಲ್ಲ. ಸತ್ವ ಹೀನರಿಗೆ ಸ್ಥಾನವಿಲ್ಲ.

ಹಲವಾರು ಉದಾತ್ತ ಗುಣಗಳನ್ನು ರಾಜರ್ಷಿಗಳಲ್ಲಿರಿಸಿ, ಅವರ ವ್ಯಕ್ತಿತ್ವವನ್ನು ಉಜ್ವಲಗೊಳಿಸಿದಷ್ಟು ಪ್ಲೇಟೋಗೆ ತೃಪ್ತಿ ಇದ್ದಂತೆ ಕಾಣುವುದಿಲ್ಲ. ಅವರನ್ನು ಸರ್ವೋತ್ತಮರನ್ನಾಗಿಸುವುದು ಅವನ ಹಂಬಲವಿದ್ದಂತೆ

ತೋರುತ್ತದೆ. ಕಾರಣ, ಆದರ್ಶ ರಾಜ್ಯದ ರಾಜರ್ಷಿಗಳು ಸಾಮಾನ್ಯರಲ್ಲ. ಸದಾ ಸತ್ಯವನ್ನು ಕುರಿತು ಚಿಂತಿಸುವ, ಮತ್ತೆ ಅದನ್ನು ಸಾಕ್ಷಾತ್ಕರಿಸಿಕೊಂಡ ತತ್ತ್ವಜ್ಞಾನಿಗಳು. ಅಸಾಧಾರಣ ಸ್ಮರಣ ಶಕ್ತಿಯುಳ್ಳ, ರೇಖಾಗಣಿತವನ್ನು ಕರಗತ ಮಾಡಿಕೊಂಡ, ಸಕಲ ಶಾಸ್ತ್ರ ಪಾರಂಗತರು. ತಾಳ್ಮೆ, ಎದೆಗಾರಿಕೆ, ಗಾಂಭೀರ್ಯ, ಸತ್ಯ, ನ್ಯಾಯಗಳಲ್ಲಿ ಸ್ನೇಹ ಪರತೆ, ಇತ್ಯಾದಿ ಔದಾರ್ಯ ಗುಣಗಳನ್ನು ಆವಿಷ್ಕರಿಸಿ ಕೊಂಡ ಮಹಾನುಭಾವರು. ಭೋಗೋಪ ಜೀವನ ಮತ್ತು ಅಧಿಕಾರ ಲಾಲಸೆಗಳಿಗೆ ಒಳಗಾಗದ ನಿಷ್ಕಾಮ ಕರ್ಮಿಗಳು. ಹೆಚ್ಚು ಕಡಿಮೆ ಭಗವದ್ಗೀತೆಯಲ್ಲಿ ವರ್ಣಿತವಾಗಿರುವ "ಸ್ಥಿತ ಪ್ರಜ್ಞ''ರಂತೆ ಪರಿಪೂರ್ಣರು.

ಈ ಆದರ್ಶಗಳಿಗೆ ಪ್ಲೇಟೋ ವಾಲುವುದರ ಹಿನ್ನೆಲೆ ಸ್ಪಷ್ಟ. ''ಧರ್ಮಗುಣವೇ ಜ್ಞಾನ" (Virtue is Knowledge) ಅಥವಾ "ಗುಣವೆಯೇ ಜ್ಞಾನಿ" ಎಂಬ ಸೋಕ್ರ ಟೀಸ್‌ನ ಮಂತ್ರ ಪ್ಲೇಟೋನ ಮೇಲೆ ಅಚ್ಚೊತ್ತಿದಂತಿತ್ತು. ಅಂತಹ ನೈತಿಕ ಪ್ರಭಾವ ರಾಜರ್ಷಿಗಳ ವ್ಯಕ್ತಿ ಚಿತ್ರಣ ದಲ್ಲಿ ಮೂಡಿ ಬಂದಿರುವುದನ್ನು ನಾವು ಸ್ಪಷ್ಟವಾಗಿ ಗುರುತಿಸ ಬಹುದು.

### ಸಾರಾಂಶ

"ರಿಪಬ್ಲಿಕ್'' ನಲ್ಲಿ ಪ್ರತಿಪಾದಿತವಾದ ಕೆಲವು ವಿಷಯಗಳು ಅಮೂಲ್ಯವಾದವುಗಳು. ಪ್ಲೇಟೋ ಕಾಲ ವಾಗಿ ಇಪ್ಪತ್ತಮೂರು ಶತಮಾನಗಳು ಗತಿಸಿದ್ದರೂ

ಆವನ ಮೂಲ ತತ್ವಗಳ ಸತ್ವ ಇನ್ನೂ ಕುಗ್ಗಿಲ್ಲ. ಮೊದಲನೇ ಯದಾಗಿ ವರ್ಗ ವ್ಯವಸ್ಥೆ ನಿಜಕ್ಕೂ ಮೆಚ್ಚುವಂತಹದು. ಮನುಷ್ಯನ ಸ್ವಭಾವ ಜನ್ಯವಾದ ಮೂಲ ಗುಣಗಳಿಗನು ಗುಣವಾಗಿ ವೃತ್ತಿ ವಿಂಗಡಣೆ. ಇಲ್ಲಿ ವ್ಯಕ್ತಿಯ ಕಾರ್ಯ ಸಾಧಿಸುವ ಶಕ್ತಿ ಅಥವಾ ಚೈತನ್ಯ ಮುಖ್ಯವೇ ಹೊರತು ಅವನ ಅಥವಾ ಅವಳ ಹುಟ್ಟು ಮುಖ್ಯವಲ್ಲ. ದಕ್ಷತೆ ಮತ್ತು ಅರ್ಹತೆಯನ್ನಾಧರಿಸಿ ವ್ಯಕ್ತಿಗೆ ಸ್ಥಾನ ಮಾನವನ್ನು ಕಲ್ಪಿಸಿ, ಅದಕ್ಕನುಗುಣವಾದ ವೃತ್ತಿಯನ್ನು ಸಿಗದಿ ಪಡಿಸು ವುದು ಸಾಮಾಜಿಕ ಸ್ವಾಸ್ಥ್ಯಕ್ಕೆ ಅತಿ ಅವಶ್ಯ. ಈ ಹೇಳಿಕೆ ಪ್ಲೇಟೋನ ಫಲವತ್ತಾದ ಬುದ್ಧಿಮತ್ತೆಗೆ ಒಂದು ನಿದರ್ಶನ. ಹಾಗೆನೇ, ಶಿಕ್ಷಣವೆಂಬುದು ಒಂದು ಸೃಜನಾತ್ಮಕ ಶಕ್ತಿ. ಸಮಗ್ರ ವ್ಯಕ್ತಿ ವಿಕಾಸವೇ ಆದರ ಗುರಿ. ಪರಿಪೂರ್ಣತೆಯ ಆವಿರ್ಭಾವ. ವ್ಯಕ್ತಿಗಳು ಸತ್ಪ್ರಜೆಗಳಾಗದೆ ಸುಖೀರಾಜ್ಯ ಅಸಾಧ್ಯ. ಇತ್ಯಾದಿ ಶಿಕ್ಷಣದ ಬಗೆಗಿನ ವಿಚಾರಗಳು ಬಹು ಮನನೀಯ.

ಮತ್ತೆ ರಾಜಕೀಯಕ್ಕೂ ನೀತಿಗೂ ನಿಕಟ ಸಂಬಂಧ ಕಲ್ಪಿಸುತ್ತಾನೆ. ಅವನ ದೃಷ್ಟಿಯಲ್ಲಿ ನೀತಿ ರಹಿತ ರಾಜ ಕೀಯ ವರ್ಜ್ಯ. ಅದೇ ತೆರನಾಗಿ ಹುಟ್ಟಿನಿಂದ ಎಲ್ಲರೂ ಸಮಾನರಲ್ಲ. ಜ್ಞಾನಾರ್ಜನೆಗೆ ಸಾಮಾನ್ಯ ಪ್ರಜೆ ಅನರ್ಹ. ಜ್ಞಾನ ಅವನಿಗೆ ಎಟುಕದ ವಿಷಯ. ಹಾಗೆ ನೋಡಿದರೆ ಅಜ್ಞ ಜನತೆಯ ಸರ್ಕಾರ, ಜನ ಜಂಗುಳಿಯ ಸರ್ಕಾರ. ಕಾರಣ ಪ್ರಜಾಪ್ರಭುತ್ವ ನಿಸ್ಸಾರವಾದುದು. ಅದು ಒಳಿತನ್ನಾಗಲೀ,

ಕೆಡುಕನ್ನಾಗಲೀ ಮಾಡವು. ಬುದ್ಧಿವಂತರ ಆಳ್ವಿಕೆಗೊಳಗಾದ ಪ್ರಭುತ್ವ ಅಥವಾ ಸರಕಾರ ಅರ್ಥಪೂರ್ಣ. ಅಂದರೆ ಬುದ್ಧಿವಂತ, ಶ್ರೀಮಂತ ಸದ್ಗುಣಿಗಳ (Intellectual Aristocracy) ಆಳ್ವಿಕೆ ಉತ್ಕೃಷ್ಟ.

ಹಾಗೆ ಪ್ಲೇಟೋನ ದೃಷ್ಟಿಯಲ್ಲಿ ರಾಜ್ಯಭಾರ ಮಾಡುವುದೊಂದು ಕಲೆ. ಕಂಡವರು ಅಧಿಕಾರ ಗದ್ದುಗೆಗೆ ಬರಕೂಡದು. ಅಧಿಕಾರ ಅಪೇಕ್ಷಿಸುವವರು ತಕ್ಕ ತ್ಯಾಗಕ್ಕೆ ಸಿದ್ಧರಿರಬೇಕು. ಸೂಕ್ತ ಶಿಕ್ಷಣ, ಸಂಸ್ಕಾರ, ಅನುಭವ, ಪ್ರಾಮಾಣಿಕತೆ ಇತ್ಯಾದಿ ಅರ್ಹತೆಗಳನ್ನು ಪಡೆದಿರತಕ್ಕದ್ದು. ಜ್ಞಾನನಿಷ್ಠ ಮತ್ತು ಕ್ರಿಯಾನಿಷ್ಠರಿಗೇ ಸ್ಥಾನ. ಅಧಿಕಾರ, ಲಾಲಸೆ, ಸುಖಾನುಭವ, ಇವುಗಳಲ್ಲಿ ಮುಳುಗಿರುವವರು ಸಮಾಜವನ್ನು ಅಧೋಗತಿಗೆ ತಳ್ಳುವರು. ಆಳುವವರು ನಿಸ್ಪೃಹ ಹಾಗೂ ಪ್ರಾಮಾಣಿಕರಾಗದೆ ಅರಾಜಕತೆ ತಪ್ಪಿದ್ದಲ್ಲ. ಇವೇ ಕೆಲವು ವಿಚಾರಗಳು ಮೇಲಿಂದ ಮೇಲೆ ಮೆಲಕು ಹಾಕುವಂತಹವುಗಳು.

## ೨೨. ಭಾವನೆ ಸಾಕ್ಷಾತ್ಕಾರ

“ಪ್ಲೇಟೋ ಕಲ್ಪಿತ ಆದರ್ಶರಾಜ್ಯ ಭಾವನಾ ಪ್ರಪಂಚಕ್ಕೆ ಸೀಮಿತವೇ ಹೊರತು ವಾಸ್ತವ ಪ್ರಪಂಚಕ್ಕಲ್ಲ. ರಾಗದ್ವೇಷಾದಿಗಳಿಂದ ಕೂಡಿದ ಮಾನವ ಪ್ರಪಂಚದಲ್ಲಿ ಅಂತಹ ರಾಜ್ಯ ಸ್ಥಾಪನೆ ಅಸಾಧ್ಯ” ಹಾಗೆಂದು ವಿಮರ್ಶಕ ಅಭಿಪ್ರಾಯ. ಆದಾಗ್ಯೂ ಚ್ಯುತಿ ಇಲ್ಲದೆ, ಬದಲಾವಣೆಗೆ ಗುರಿಯಾಗದ, ನಿತ್ಯ

ವಾದ, ಸರ್ವಕಾಲಕ್ಕೂ ಉಪಯುಕ್ತವಾದ ಆದರ್ಶರಾಜ್ಯ ವನ್ನು ಕಟ್ಟಬೇಕೆಂಬ ಪ್ಲೇಟೋನ ಕಳಕಳಿಯ ಪ್ರಯತ್ನ ಮೆಚ್ಚುವಂತಹದು. ಅಷ್ಟೇ ಏಕೆ, ಆದರ್ಶದ ಮೂಲಕ ಈ ಜಗತ್ತನ್ನು ನಂದನವನವನ್ನಾಗಿಸಬೇಕೆಂಬುದು ಅವನ ಹಂಬಲ. ಅವನು ಕಲ್ಪಿಸಿದ ಆದರ್ಶರಾಜ್ಯ ವಾಸ್ತವ ಪ್ರಪಂಚಕ್ಕೆ ಸಾಧ್ಯ ವಾಗದಿದ್ದರೂ, ಭಾವನಾ ಪ್ರಪಂಚದಲ್ಲಾದರೂ ಸಾಧ್ಯವಾಗಲಿ ಎಂಬುದು ಅವನ ಹಾರೈಕೆ. ಎಂತಹ ಉದಾತ್ತ ಧ್ಯೇಯ !

ಇಷ್ಟು ಮಾತ್ರ ನಿಜ. ಭಾವನಾತ್ಮಕ ಆದರ್ಶರಾಜ್ಯ ವಾಸ್ತವ ಪ್ರಪಂಚಕ್ಕೆ ದೂರವಾದದ್ದು, ಅಲ್ಲದೆ ಕಾರ್ಯಸಾಧು ವಲ್ಲದೆಂದು ನಾವು ಏಕಕಾಲಕ್ಕೆ ತಳ್ಳಿಹಾಕುವಂತಿಲ್ಲ. ಕಲ್ಪನೆ ಕೇವಲ ಒಂದು ಮಾಧ್ಯಮ. ನಿಜವಾದ ಜ್ಞಾನ ಬಾಹ್ಯ ದೃಷ್ಟಿಗೆ ಗೋಚರಿಸುವುದಿಲ್ಲ. ಅದು ಭಾವನಾತ್ಮಕ ವಿಚಾರದಲ್ಲಿ ಅಡಗಿ-ರುತ್ತದೆ. ಕೇವಲ ಭಾವನೆಗಳ ಮೂಲಕ ಸತ್ಯದ ಸಾಕ್ಷಾತ್ಕಾರ ವಾಗಬೇಕೆಂಬುದು ಅವನ ಅಭಿಪ್ರಾಯ. ಕಾರಣ ಪ್ಲೇಟೋನ ಕಲ್ಪನೆಯ ಗಾಳಿ ಸತ್ಯದ ಸೌಗಂಧವನ್ನು ಹೊತ್ತು ತರುತ್ತಿದೆ. ಅವನ ಚಿಂತನಾ ಲಹರಿಯಲ್ಲಿ ಕ್ರಾಂತಿಯ ಕಿಡಿಗಳು ಸಿಡಿದಿವೆ. ಮಾನವನ ಬದುಕಿನ ಗತಿಯನ್ನು ಬದಲಿಸುವ ಶಕ್ತಿ ಆ ಚಿಂತನೆ ಯಲ್ಲಿ ಅಡಗಿದೆ.

## ೨೩. ಪ್ಲೇಟೋ ಭಾವಧಾರೆ-ಸರ್ವೋದಯ

ಕಾರಣ ಕಲ್ಪನೆ, ಕಲ್ಪನೆಯಾಗಿಯೇ ಉಳಿಯುವುದಿಲ್ಲ ಅಥವಾ ಆದರ್ಶ ಆದರ್ಶವಾಗಿಯೇ ಉಳಿಯುವುದಿಲ್ಲ. ಅವು

ಗಳಿಗೆ ತಮ್ಮದೇ ಆದ ಗೊತ್ತು-ಗುರಿಗಳುಂಟು. ಈ ವಿಷಯ ಸಮರ್ಥಿಸಲು ಇಲ್ಲಿ ನಮ್ಮದೇ ಆದ ಸಾದೃಶ್ಯವನ್ನು ಕೊಡಬಹುದು. ವಾಲ್ಮೀಕಿ ಮಹರ್ಷಿಯ ವರಪ್ರಸಾದದಿಂದ ಗಾಂಧೀಜಿಗೆ "ರಾಮ ರಾಜ್ಯ"ದ ಸ್ವರೂಪ ದರ್ಶನವಾಯಿತು. ತರುವಾಯ, ಅದೇ ಹಿನ್ನೆಲೆಯಲ್ಲಿ ಸರ್ವರ ಅಭ್ಯುದಯವನ್ನು ಹಾರೈಸುವ ಸರ್ವೋದಯ ಸಿದ್ಧಾಂತ ಪ್ರತಿಪಾದಿತವಾಯಿತು. ಶ್ರೀ ಜಯಪ್ರಕಾಶ್ ನಾರಾಯಣ್ ಮತ್ತು ಶ್ರೀ ವಿನೋಬಾಜಿಯವರಿಂದ ಪುರಸ್ಕರಿಸಲ್ಪಟ್ಟು, ಇಂದು ಭಾರತೀಯರಿಗೆ ಸರ್ವಾದರಣೀಯವಾದ ಆದರ್ಶವಾಗಿ ಮೂರ್ಛಟ್ಟಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಅಷ್ಟೇ ಏಕೆ? ಸಮತೆ, ಸಮಾನತೆಯ ಆಧಾರದ ಮೇಲೆ ಆಧುನಿಕ ರಷ್ಯಾ ಸ್ಥಾಪಿಸಿದ ಸಾಮಾಜಿಕ ವ್ಯವಸ್ಥೆ ಮತ್ತು ಅದು ಸಾಧಿಸಿದ ಶೀಘ್ರ ಪ್ರಗತಿಯನ್ನು ಗಮನಿಸಿದರೆ, ಪ್ಲೇಟೋ ಕಲ್ಪಿತ ಆದರ್ಶ ರಾಜ್ಯ ಕೇವಲ ಆದರ್ಶವಾಗಿರದೆ ವಾಸ್ತವವೂ, ಕಾರ್ಯಸಾಧುವೂ ಹೌದು ಎನ್ನಿಸದಿರದು.

ಅದೇ ರೀತಿ ಪ್ಲೇಟೋ ಚಿತ್ರಿಸಿದ ರಾಜ ಋಷಿಗಳು ಕೇವಲ ಕಾಲ್ಪನಿಕ ವ್ಯಕ್ತಿಗಳಲ್ಲ. ಅಂತಹ ಸದ್ಗುಣಿಗಳನ್ನು ಪಡೆದ ಮಹಾನುಭಾವರು ಚರಿತ್ರೆಯಲ್ಲಿ ಆಗಾಗ ಮಿಂಚಿದ್ದಾರೆ. ಪ್ರಾಚೀನ ಗ್ರೀಸ್‌ನಲ್ಲಿ ಪೆರಿಕ್ಲಸ್ ಮಹಾಶಯ ಮತ್ತು ರೋಮ್ ಸಾಮ್ರಾಜ್ಯದ ಸಾಮ್ರಾಟ ಮಾರ್ಕಸ್ ಅರಿಲಿಯಸ್‌ರನ್ನು ತದ್ರೂಪ ರಾಜರ್ಷಿಗಳೆಂದು ಹೆಸರಿಸಬಹುದಾದರೆ, ಪ್ರಾಚೀನ ಭಾರತದಲ್ಲಿ ಮಿಥಿಲೆಯ ಜನಕ ಮಹಾರಾಜ ದಶರಥ

ಶ್ರೀ ರಾಮಚಂದ್ರ ಮತ್ತು ಸಾಮ್ರಾಟ ಅಶೋಕ * ಇವರನ್ನು ಆ ವರ್ಗಕ್ಕೆ ಸೇರಿಸಬಹುದು. ಇದನ್ನು ಗಮನಿಸಿದರೆ ಪ್ಲೇಟೋನ ಆದರ್ಶ ಕೇವಲ ಕನಸಾಗಿಯೇ ಉಳಿಯುವುದಿಲ್ಲ. ಆದು ವಾಸ್ತವವೂ, ಅನುಷ್ಠಾನ ಯೋಗ್ಯವೂ ಹೌದು.

## ೨೪. ಪ್ಲೇಟೋ ಮತ್ತು ಭಾರತ

"ಸರ್ವೇಜನಾಃ ಸುಖಿನೋಭವಂತು" ಎಂಬುದು ನಮ್ಮ ಆದರ್ಶ ಪ್ಲೇಟೋನ ಮೂಲ ತತ್ವ ಪ್ರತಿಪಾದನೆ ನಮ್ಮ ಪರಂ-ಪರಾನುಗತವಾಗಿ ಬಂದ ಆದರ್ಶಗಳಿಂದ ಭಿನ್ನವಾಗಿಲ್ಲ. ಬಹು ಹತ್ತಿರವೆನ್ನಬಹುದು. ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಯ ಸ್ಥಾನ ಗೌಣ. ವ್ಯಕ್ತಿಯ ಹಿತ ಸಾಮಾಜಿಕ ಹಿತವನ್ನವಲಂಬಿ-ಸಿದೆ. ವ್ಯಷ್ಟಿ ಮತ್ತು ಸಮಷ್ಟಿಗಳ ಸಮನ್ವಯ ಸಮಾಜದ

---

* ರಾಜಯೋಗಿ ಸಾಮ್ರಾಟ ಅಶೋಕ ಶಾಸನಗಳಲ್ಲಿ ಉಲ್ಲೇಖಿಸಿರುವ ಮಾತುಗಳು ತುಂಬಾ ಗಮನಾರ್ಹ: "ನಾನು ಊಟ ಮಾಡುತ್ತಿರಲಿ, ಅಂತಃಪುರದಲ್ಲಿರಲಿ, ಶಯನ ಮಂದಿರದಲ್ಲಿರಲಿ, ಯಾವುದೇ ಕೆಲಸದಲ್ಲಿ ತೊಡಗಿರಲಿ, ಪ್ರಯಾಣಕ್ಕೆ ಹೊರಟಿರಲಿ, ವಿಶ್ರಾಂತಿ ಪಡೆಯುತ್ತಿರಲಿ, ಒಟ್ಟಿನಲ್ಲಿ ನಾನು ಎಲ್ಲಿದ್ದರೂ ವೇಳೆಯ ನಿರ್ಬಂಧವಿಲ್ಲದೆ, ನಿವೇದಕರು ಬಂದು ಜನರ ಸುಖ ದುಃಖಗಳ ವರದಿಯನ್ನು ತಿಳಿಸತಕ್ಕದ್ದು, ಎಲ್ಲಿದ್ದರೂ ನಾನು ಜನರಿಗಾಗಿ ಚಿಂತಿಸುತ್ತೇನೆ, ಜನರಿಗಾಗಿ ದುಡಿಯುತ್ತೇನೆ".

–ದೇವನಾಂ ಪ್ರಿಯ ಅಶೋಕ

ಸ್ವಾಸ್ಥ್ಯಕ್ಕೆ ಅವಶ್ಯ. ಪ್ರಜೆಗಳು ಸಮಾನ ಸುಖ-ದುಃಖಗಳಲ್ಲಿ ಭಾಗಿಗಳಾಗತಕ್ಕದ್ದು, "ಸರ್ವರಿಗೆ ಸಮಬಾಳು" "ಸರ್ವರಿಗೆ ಸಮಪಾಲು"— ಎಂಬುವುಗಳು ನಮ್ಮ ಪರಂಪರೆಯಲ್ಲಿ ಬಂದ ಮೌಲ್ಯಗಳಿಗೆ ಹೊರತಾಗಿಲ್ಲ. ವಚನಕಾರರ ದೃಷ್ಟಿಯಲ್ಲಿ "ಕಾಯಕವೇ ಕೈಲಾಸ", ಜಗತ್ತೆಂಬುದು "ಕರ್ತಾರನ ಕಮ್ಮಟ" "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲಲ್ಪಡಬೇಕು", ಅಧಿಕಾರಿಗಳು ನಿಷ್ಕಾಮ ಕರ್ಮದ ಸಂಪೂರ್ಣ ಬಾಳನ್ನು ಬಾಳಬೇಕು— ಇತ್ಯಾದಿ ಆದರ್ಶಗಳ ಸಾಮ್ಯ ಅರ್ಥಪೂರ್ಣ.

ಪ್ಲೇಟೋ ಪ್ರತಿಪಾದಿಸಿದ ತತ್ವಗಳ ಹಿನ್ನೆಲೆಯಲ್ಲಿ ಭಾರತದ ಪ್ರಚಲಿತ ಸಾಮಾಜಿಕ ಮತ್ತು ರಾಜಕೀಯ ವಿದ್ಯಮಾನಗಳನ್ನು ಪರಿಶೀಲಿಸಿದರೆ ಎಂಥವರಿಗೂ ಜಿಗುಪ್ಸೆ ಬಾರದೇ ಇರದು. ಆ ದಾರ್ಶನಿಕ ವ್ಯಕ್ತಪಡಿಸಿದ ವಿಷಯಗಳಿಗೆ ತೀರಾ ತದ್ವಿರುದ್ಧ ಸನ್ನಿವೇಶ ನಮ್ಮದು. ಮೊದಲಲ್ಲಿ ಜನತಂತ್ರ ಕುಸಿಯುತ್ತದೆ. ಹೆಸರಿಗೆ ಪ್ರಜಾಪ್ರಭುತ್ವವೆನಿಸಿದರೂ ಅಂತಃಸತ್ವ ಶೂನ್ಯ. ವ್ಯಕ್ತಿ ಸ್ವಾತಂತ್ರ್ಯ, ಘನತೆ, ಗೌರವಗಳಿಗೆ ಕಾಸಿನ ಬೆಲೆ ಇಲ್ಲ. ಸಾರ್ವಜನಿಕ ಜೀವನದಲ್ಲಿ ನೀತಿ, ನಿಯಮಗಳಿಗೆ ಅರ್ಥವಿಲ್ಲ. ಅವುಗಳ ಉಲ್ಲಂಘನೆ ಸರ್ವೇಸಾಮಾನ್ಯ. ಮಾನವೀಯ ಮೌಲ್ಯಗಳಂತೂ ಹದಗೆಡುತ್ತಿವೆ. ಹಸಿವು, ಬಡತನ, ಅಜ್ಞಾನ, ಅನಕ್ಷರತೆ ಇತ್ಯಾದಿ ಅನಿಷ್ಟಗಳ ಉಲ್ಬಣ. ದೇಶ ಹಲವು ಹತ್ತು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ತತ್ತರಿಸುತ್ತಿದೆ. ಒಂದೆಡೆ ದಿವಾಳಿಯಾಗುತ್ತಿರುವ ಗ್ರಾಮ ಜೀವನ, ಆರ್ಥಿಕ ಮುಗ್ಗಟ್ಟು, ಬೆಳೆದು ನಿಂತ ನಿರುದ್ಯೋಗ, ಸಂಕುಚಿತ ಜಾತೀ

ಯತೆಯ ವೈಷಮ್ಯ ಮತ್ತು ಶಿಕ್ಷಣ ವ್ಯವಸ್ಥೆಯ ವೈಫಲ್ಯ. ಇನ್ನೊಂದೆಡೆ, ನೀತಿರಹಿತವಾಗುತ್ತಿರುವ ಧಾರ್ಮಿಕ ಸಂಸ್ಥೆಗಳು. ಸ್ವೇಚ್ಛಾಚಾರದ ಭ್ರಷ್ಟಾಚಾರಕ್ಕೆ ಅಂಟಿಕೊಂಡ ಅನೈತಿಕ ಅಧಿಕಾರೀ ವರ್ಗ. ಮತ್ತೆ ಎಲ್ಲಕ್ಕೂ ಮಿಗಿಲಾಗಿ ಸರ್ವಾಧಿಕಾರೀ ಮನೋಭಾವದ ರಾಜಕಾರಣದ ಪ್ರಾಬಲ್ಯ. ಪ್ರಜೆಗಳು ಶೋಷಣೆಗೊಳಗಾದ ಬಲಿಪಶುಗಳು. ಅವರ ಜೀವನ ದುರ್ಬರ. ಶಕ್ತಿ ರಾಜಕೀಯದಲ್ಲಿ ಬುದ್ಧಿಜೀವಿಗಳಿಗೆ ನಿಜಕ್ಕೂ ಸ್ಥಾನವಿಲ್ಲ. ಅವರು ನಿಸ್ಸಹಾಯಕರು. ರಾಜಕೀಯ ಕಪಟ ನಾಟಕದಲ್ಲಿ ಮೂಕ ಪ್ರೇಕ್ಷಕರು. ಹೀಗಿರುವಾಗ, ಸಾರ್ವಜನಿಕ ಜೀವನದಲ್ಲಿ ಪ್ರತಿಭಾ ದಾರಿದ್ರ್ಯ ತುಂಬಿ ತುಳುಕುತ್ತಲಿದೆ. ರಾಷ್ಟ್ರದ ಹಿತಚಿಂತನೆ ಮಾಡುವವರ ಸಂಖ್ಯೆ ದಿನೇ ದಿನೇ ಕ್ಷೀಣಿಸುತ್ತಿದೆ. ಗಾಂಧೀ ಮತ್ತು ನೆಹರೂರವರಂತಹರು ಪ್ರತಿಪಾದಿಸಿದ ಆದರ್ಶದ ನೆಲೆಗಟ್ಟು ಶಿಥಿಲವಾಗಿದೆ. ತಿಲಕ್, ಭೋಸ್ ಮತ್ತು ಪಟೇಲ್‌ರಂತಹ ಉಜ್ವಲ ರಾಷ್ಟ್ರಪ್ರೇಮಿಗಳು ನಮ್ಮಿಂದ ಮರೆಯಾದರು. ಲಾಲ್‌ಬಹದ್ದೂರ್ ಶಾಸ್ತ್ರಿಗಳಂತಹ ಧೀಮಂತ, ಪ್ರಾಮಾಣಿಕ ಮತ್ತು ಕಾರ್ಯಶೀಲ ವ್ಯಕ್ತಿಗಳು ಮಾಯವಾದರು. ನಾವಿಂದು ತಬ್ಬಲಿಗಳು. ನಮ್ಮನ್ನು ಕೈಹಿಡಿದು ನಡೆಸುವ ವರ್ಚಸ್ವೀ ಮುಖಂಡತ್ವದ ಅಭಾವದಿಂದಾಗಿ ದೇಶವಿಂದು ದುರಂತದ ದವಡೆಗೆ ತಳ್ಳಲ್ಪಟ್ಟಿದೆ.

## ೨೫. ತಜ್ಞರ ಕರೆ

ಕೊನೆಯದಾಗಿ ಪ್ಲೇಟೋ ಮಹಾಶಯನ ಈ ಮಾತಿನೊಡನೆ ವಿಷಯ ಪರಿಸಮಾಪ್ತಿಗೊಳಿಸೋಣ :

ಎಲ್ಲಿಯವರೆಗೆ ಋಷಿಗಳು ರಾಜರಾಗುವುದಿಲ್ಲವೋ, ಅಥವಾ ಎಲ್ಲಿಯವರೆಗೆ ದಾರ್ಶನಿಕ ಮಹತ್ವ ಮತ್ತು ರಾಜಕೀಯ ಪಟುತ್ವಗಳೆರಡೂ ಏಕೀಭವಿಸಿ ದಕ್ಷ ಆಡಳಿತ ಮೂಡಿ ಬರುವುದಿಲ್ಲವೋ, ಪ್ರಭುಗಳು ಅಥವಾ ಮುಖಂಡರೆನಿಸಿಕೊಂಡವರು ಪ್ರಾಮಾಣಿಕರಾಗಿ ಉಳಿಯುವುದಿಲ್ಲವೋ, ಪ್ರಜೆಗಳು ಸೂಕ್ತ ಶಿಕ್ಷಣದ ಮೂಲಕ ಸಜ್ಜನಿಕೆಯನ್ನು ಆವಿಷ್ಕರಿಸಿಕೊಳ್ಳುವುದಿಲ್ಲವೋ, ಮತ್ತೆ ಅಯೋಗ್ಯರೆನಿಸಿಕೊಂಡವರು ಅಧಿಕಾರ ಗದ್ದುಗೆಯಿಂದ ದೂರ ಸರಿಯುವುದಿಲ್ಲವೋ ಅಲ್ಲಿಯವರೆಗೆ ರಾಜ್ಯಗಳಿಗೆ ಕ್ಷೋಭೆ ತಪ್ಪಿದ್ದಲ್ಲ. ಅಷ್ಟೇ ಏಕೆ? ಮಾನವ ಜನಾಂಗಕ್ಕೇ ಕೇಡು ತಪ್ಪಿದ್ದಲ್ಲ; ಸುರಾಜ್ಯ ಈ ಭೂಮಿಯಲ್ಲಿ ಸ್ಥಾಪಿತವಾಗುವುದಿಲ್ಲ.

---